

ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಭಾರತೀಯ ಭಾಷಾಧ್ಯಯನದ ಪರಂಪರೆ

ಡಾ. ಜೆ. ಶ್ರೀನಿವಾಸಮೂರ್ತಿ

# ಭಾರತೀಯ ಭಾಷಾಧ್ಯಯನದ ಪರಂಪರೆ

ಡಾ. ಜೆ. ಶ್ರೀನಿವಾಸಮೂರ್ತಿ



ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

**BHARATHIYA BHASHADYAYANAD PARAMPARE**

Dr. J. Shrinivasmurthy,
Dept. of Sanskrit,
M. E. S. College, Malleshwaram,
Bangalore-3

*Published by*
The Director
Prasaranga
Kannada University, Hampi
Vidyaranya-583 276

Pp: 30 Rs: 10-00

First Impression : 2000



ಪ್ರಕಾಶಕರು
ಪ್ರೊ. ಎ.ವಿ. ನಾವಡ
ನಿರ್ದೇಶಕರು, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

ಮುಖಪುಟ ವಿನ್ಯಾಸ
ಕೆ. ಕೆ. ಮಕಾಳಿ

ಬೆಲೆ ರೂ : ೧೦

ಅಕ್ಷರ ಸಂಯೋಜನೆ ಮತ್ತು ಮುದ್ರಣ
ತ್ವರಿತ ಮುದ್ರಣ ಆಫ್‌ಸೆಟ್ ಪ್ರಿಂಟರ್ಸ್
ಗದಗ ✆ : ೩೭೫೬೬, ೩೫೫೦೯

# ಭಾರತೀಯ ಭಾಷಾಧ್ಯಯನದ ಪರಂಪರೆ

ಭಾರತಿ ಎಂದರೆ ಅರ್ಥವತ್ತಾದ ಮಾತು. ಹಾಗೆಯೇ ಭಾರತೀಯ ಎಂದರೆ ನಮ್ಮ ದೇಶ ಭಾರತಕ್ಕೆ ಸಂಬಂಧಿಸಿದ್ದು ಎಂದೂ ಅರ್ಥ. ಭಾಷಾ ಎಂದರೆ ಹೇಳಿದ್ದು–ಆಡಿದ್ದು. ಇವು ಕೋಶದ ಅರ್ಥಗಳು. ಇವನ್ನು Speech ಮತ್ತು Language ಎನ್ನುವುದಕ್ಕೆ ಸಮ ಎನ್ನಬಹುದು. ಭಾರತೀ, ಗೀಃ, ವಾಕ್, ವಾಣೀ, ಸರಸ್ವತೀ ಎಂಬ ಸ್ತ್ರೀ ಲಿಂಗಾಂತ ಪದಗಳು ಭಾಷಾ ಸಾಮಾನ್ಯವನ್ನು ಹೇಳುತ್ತವೆ. ಇದನ್ನು 'ಮಾತು' ಎನ್ನೋಣ. ಭಾಷಾ, ಉಕ್ತಿ, ವಚನ, ವಾಕ್ಯ, ಶಬ್ದ ಎಂಬ ಸ್ತ್ರೀ, ಪುಂ, ನಪುಂಸಕ ಪದಗಳು ಸಂಸ್ಕೃತ, ಪ್ರಾಕೃತ ಮುಂತಾದ ನಿರ್ದಿಷ್ಟ ನುಡಿಗಳಿಗೆ ಅನ್ವಯಿಸುತ್ತವೆ. ಇದನ್ನು 'ನುಡಿ' ಎನ್ನೋಣ, ಮಾತು ಮತ್ತು ನುಡಿ ಪರಸ್ಪರ ಸಂಬದ್ಧವಾದರೂ ಮೊದಲನೆಯದು ಹೆಚ್ಚು ವ್ಯಾಪ್ತಿಯನ್ನು ಪಡೆದಿದ್ದು, ಅದನ್ನು ಕುರಿತ ಆಲೋಚನೆಗಳು ಆಧ್ಯಾತ್ಮಿಕ ನೆಲೆಗೆ ಹತ್ತಿರವಾಗಿದೆ. ಎರಡನೆಯದು ಲೌಕಿಕ ಬಳಕೆ ಮತ್ತು ಅಲ್ಲಿನ ನಿಯಮಗಳಿಗೆ ಹೆಚ್ಚು ಹತ್ತಿರವಾಗಿದೆ. ಭಾಷಾ ಎಂಬ ಸಂಸ್ಕೃತದ ಪದ ಎರಡೂ ಕಡೆಗೆ ಅನ್ವಯಿಸಿಕೊಳ್ಳಬಹುದಾದದ್ದು. ಆದ್ದರಿಂದ ಭಾಷಾಧ್ಯಯನ ಎಂದಾಗ ಎರಡೂ ನೆಲೆಗಳಿಗೆ ಅನ್ವಯಿಸಿದ ಅಧ್ಯಯನವನ್ನು ಗಮನಿಸ ಬೇಕಾಗುವುದು.

'ಭಾಷಾ' ಎನ್ನುವುದಕ್ಕಿರುವ ಪರ್ಯಾಯ ಪದಗಳು ಭಿನ್ನ ಧಾತುಗಳಿಂದ ಬಂದಿದ್ದು, ಅವು ಭಾಷೆಯ ಹಲವು ಮುಖಗಳನ್ನು ತೋರಿಸುತ್ತವೆ. 'ಮಾತು ಸ್ವತಃ ಬೆಳಗುತ್ತಾ ವಿಶ್ವವನ್ನು ಬೆಳಗುವ ಜ್ಯೋತಿ' ಎಂದು ದಂಡಿಯು ಹೇಳಿದ ಮಾತಿನಲ್ಲಿ ಭಾರತಿಯ 'ಭಾ' ಎಂದರೆ 'ಬೆಳಗು' ಎನ್ನುವ ಅರ್ಥಕ್ಕೆ ಪುಷ್ಟಿಯಿದೆ. ಈ ಜ್ಯೋತಿ –ಬೆಳಕು ಚೆಲ್ಲಿದಂತೆ ನೆರಳನ್ನೂ ತೋರುತ್ತದೆ. ಹಾಗಾಗಿ ಮಾತು ಪ್ರಕಾಶಕವಾದರೂ ಅದರ ನಿಗೂಢತೆಯೇ ವೇದಕಾಲದಿಂದ ಆಧ್ಯಾತ್ಮಿಕರಿಗೆ ಸವಾಲಾಗಿದೆ. ಇದರಿಂದಾಗಿ 'ಮಾಯಾ' ಕಲ್ಪನೆಯ ಜೊತೆಗೆ 'ವಾಕ್'ನ ಚಿಂತನೆ ಬೆಳೆದಿದೆ. ಪರಮ ಅರ್ಥದಲ್ಲಿ ಮಾಯೆ ಕಳಚಿದಾಗ ಮಾತು ಇರುವುದಿಲ್ಲ.

### ವೇದಗಳಲ್ಲಿನ ಹಿನ್ನೆಲೆ

ವಾಕ್‌ನ ನಿಗೂಢತೆ ವಿಶ್ವದ ನಿಗೂಢತೆಗೆ ಸಂವಾದಿ, ''ಕಾಣುವ ವಿಶ್ವ ಕಾಲುಭಾಗ ಮಾತ್ರ, ಮುಕ್ಕಾಲು ಭಾಗ ಅಮೃತವಾದ ದೇವಲೋಕದಲ್ಲಿ ಇದೆ'' ಎಂದ ಪುರುಷ ಸೂಕ್ತದ (ಋ. ವೇ ×–೯೦–೩ ಮತ್ತು ೪) ಮಾತಿಗೆ ಸಮನಾಗಿ ವಾಕ್ ಕೂಡ

ಮೂರು ಪಾಲು ಗುಹೆಯಲ್ಲಿ ಅಡಗಿದ್ದು ನಾಲ್ಕನೆ ಒಂದು ಪಾಲು ಮಾತ್ರ ಮನುಷ್ಯ ವ್ಯವಹಾರ ದಲ್ಲಿದೆ (ಗುಹಾತ್ರೀಣಿ ನಿಹಿತಾ ನೇಂಗಯಂತಿ ತುರೀಯಂ ವಾಚೋ ಮನುಷ್ಯಾ ವದಂತಿ) ಎಂಬ ಋಚೆ I–೧೬೪–೪೫ ರಲ್ಲಿದೆ. ಋ ವೇ X–೭೧ರ ೧, ೨, ೪ ನೇ ಋಕ್ಕುಗಳಲ್ಲಿ 'ಗುಹೆಯಲ್ಲಿ ಅವಿತಿದ್ದು ಅರ್ಥಗಳಿಗೆ ನಾಮವನ್ನು ಪ್ರೇರೇಪಿಸುವ ವಾಕ್, ಧೀರರು ಮನಸ್ಸಿನಿಂದ ಸೋಸಿ ಬಳಸಿದಾಗ ಸಖ್ಯತೆ, ಭದ್ರತೆ ಮತ್ತು ಲಕ್ಷ್ಮಿಯನ್ನು ತರುತ್ತದೆ...... ಸುಂದರವಾಗಿ ಅಲಂಕೃತಳಾದ ಹೆಂಡತಿಯಂತೆ ಪ್ರಕಟಿಸಿದಷ್ಟೇ ನಿಗೂಢವೂ ಹೌದು' ಎಂದಿದೆ. ನಾಮ ರೂಪಾತ್ಮಕ ಜಗತ್ತಿನ ಮಾಯಾವಾದದ ಮೂಲವೂ ಇಲ್ಲಿದೆ. ಭಾಷೆ ಸಖ್ಯ–ಎಂದರೆ ಸಂವಹನವನ್ನೂ, ಲಕ್ಷ್ಮಿ ಎಂದರೆ ಸಂಪತ್ತನ್ನೂ ಅರಿತು ಬಳಸಿದಾಗ–ತಂದುಕೊಡುತ್ತದೆ ಎನ್ನುವ ಮಾತು, ಮನುಷ್ಯನ ಬುದ್ಧಿಯ ಬಳಕೆಯಾಗಿಯೂ, ಉತ್ಪಾದನಾ ಸಾಮರ್ಥ್ಯವನ್ನು ಬೆಳೆಸುವ ಸಾಧನ ವಾಗಿಯೂ ಭಾಷೆ ಆಗಿರುವುದನ್ನು ಗುರುತಿಸುತ್ತದೆ.

ಋ. ವೇ X–೧೨೫ ನೇ ಸೂಕ್ತ ಅಂಭ್ರಣಿ ಋಷಿಯ ಮಗಳು 'ವಾಕ್' ತನ್ನ ಮಹಿಮೆಯನ್ನು ಬಣ್ಣಿಸಿಕೊಳ್ಳುವ ಸೂಕ್ತ. ವಾಕ್ ತನ್ನ ದೈವಿಕ ಒಡನಾಟ ಮತ್ತು ಶಕ್ತಿ ಯನ್ನು ವರ್ಣಿಸುವ ಈ ಮಂತ್ರಕ್ಕೆ ಭಾಷ್ಯ ಬರೆಯುವ ಸಾಯಣರು 'ವಾಕ್ ಬ್ರಹ್ಮ ನೊಂದಿಗೆ ತಾದಾತ್ಮ್ಯದಿಂದ ಈ ಮಾತು ಹೇಳುತ್ತಿದ್ದು ಮಾಯೆಯೆ ಎಲ್ಲವೂ ಆಗಿದೆ'. ಎಂದು ವಾಕ್ ಮತ್ತು ಮಾಯೆಗಳನ್ನು ಸಮೀಕರಿಸಿದ್ದಾರೆ. ಈ ಸೂಕ್ತದಲ್ಲಿ (X–೧೨೫–೫) 'ನಾನು (ವಾಕ್) ಯಾರನ್ನು ಕಾಮಿಸುವೆನೂ ಅವನನ್ನು ಉಗ್ರನ ನ್ನಾಗಿ, ಬ್ರಹ್ಮನನ್ನಾಗಿ, ಋಷಿಯಾಗಿ, ಮೇಧಾವಿಯಾಗಿ ಮಾಡುತ್ತೇನೆ' ಎಂದು ಭಾಷೆ ಉದ್ಬೋಧಿಸುವ ವೃತ್ತಿ, ಪ್ರವೃತ್ತಿಗಳನ್ನು ತಿಳಿಸಲಾಗಿದೆ. ದ್ಯಾವಾ ಪೃಥ್ವಿಗಳಲ್ಲಿ ವ್ಯಾಪಿಸಿದ ಬ್ರಹ್ಮತತ್ವ ಎಷ್ಟು ವ್ಯಾಪಕವೋ ವಾಕ್ ಸಹ ಅಷ್ಟೇ ವ್ಯಾಪಕವೆಂದು ಋ. ವೆ. X–೧೧೪–೮ ರಲ್ಲಿ ಹೇಳಿದೆ.

ತೈತ್ತಿರೀಯ ಸಂಹಿತೆ ೬–೪–೭–೩ ರಲ್ಲಿ ವಾಕ್‌ನ ಉಗಮವನ್ನು ಕುರಿತು ಹೀಗೆ ಹೇಳಿದೆ. 'ಇಂದ್ರ, ವಾಯುಗಳಿಗೆ ಒಟ್ಟಿಗೆ ಒಂದು ಬಟ್ಟಲಲ್ಲಿ ಸೋಮರಸವನ್ನು ಕೊಟ್ಟಾಗ ಅದನ್ನು ಇಂದ್ರ ಮಧ್ಯದಲ್ಲಿ ತೂರಿ ವ್ಯಾಪಿಸಿಕೊಂಡಾಗ ಬದಲಾಗುವ ಹಾಗೂ ಗೋಚರಿಸುವ ಭಾಷೆ ಹುಟ್ಟಿತು.' ಇದು ಮನಸ್ಸಿಗೂ ವಾಯು (ಪ್ರಾಣ)ವನ್ನು ಭಾಷೆಯಾಗಿ ಬದಲಿಸುವುದಕ್ಕೂ, ಪ್ರಜ್ಞೆಗೂ ಇರುವ ಸಂಕೀರ್ಣ ಸಂಬಂಧವನ್ನು ರೂಪಕವಾಗಿ ಚಿತ್ರಿಸಿದೆ ಎನ್ನಿಸುವುದು.

ಮಂತ್ರಗಳು ಸ್ಫೂರ್ತಿಯಿಂದ ಬಂದ ಮಾತುಗಳು. ಶಾಸ್ತ್ರೀಯ ಚಿಂತನೆಗಳಲ್ಲ. ಆದ್ದರಿಂದ ಅಲ್ಲಿನ ರೂಪಕ, ಒಗಟು ಉದ್ಗಾರಗಳನ್ನು ನಾವು ವ್ಯಾಖ್ಯಾನಿಸಿಕೊಳ್ಳುವುದು ಅನಿವಾರ್ಯ. ಇದೇ ರೀತಿಯಲ್ಲಿ ಪುರಾಣಗಳಲ್ಲಿನ ವಾಕ್‌ಪತಿ, ಸರಸ್ವತಿ ಶಾರದೆ ಮುಂತಾದ ದೇವತೆಗಳನ್ನೂ ಅವರ ಸಂಬಂಧದ ಕಥೆಗಳನ್ನೂ, ತಾಂತ್ರಿಕ ಯಂತ್ರ

ಮಂತ್ರಗಳನ್ನೂ ವ್ಯಾಖ್ಯಾನಿಸಿಕೊಳ್ಳಬೇಕು. ಈ ಎಷ್ಟೋ ಸಂಗತಿಗಳು ಅನುಭಾವಿ ಪರಂಪರೆಯಲ್ಲಿ, ವಚನಗಳಲ್ಲಿ ಪ್ರತಿಫಲಿತವಾಗಿರುವುದನ್ನೂ ಕಾಣಬಹುದು.

## ಬ್ರಾಹ್ಮಣ-ಆರಣ್ಯಕಗಳಲ್ಲಿನ ಶಾಸ್ತ್ರದ ಉಗಮ

ಸಂಹಿತೆಯ ಕಾಲದ ನಂತರ ಸಂಹಿತೆಗಳನ್ನೂ ಅಲ್ಲಿನ ಉಕ್ತಿಗಳನ್ನೂ ಅರ್ಥೈಸುವ ಬ್ರಾಹ್ಮಣಗಳ ಪ್ರಯತ್ನದಲ್ಲಿ ಭಾಷಾಶಾಸ್ತ್ರದ ಆರಂಭವಿದೆ.

ವೇದದ ಬ್ರಾಹ್ಮಣಗಳಲ್ಲಿ ಮಂತ್ರದ ಅರ್ಥವನ್ನೂ ಅದಕ್ಕೆ ಸಂಬಂಧಿಸಿದ ಕರ್ಮವನ್ನು ಕುರಿತ ವಿವರಣೆಗಳಿವೆ. ಆ ಸಂದರ್ಭದಲ್ಲಿ ಕೆಲವು ಪದಗಳನ್ನು ವಿಶ್ಲೇಷಿಸುವ ಮತ್ತು ಪದಗಳ ಕಥೆ ಹೇಳುವ ಪ್ರಸಂಗಗಳಿವೆ. ಇದು ಶತಪಥ, ಗೋಪಥ ಮತ್ತು ತಾಂಡ್ಯ ಬ್ರಾಹ್ಮಣಗಳಲ್ಲಿ ವಿಶೇಷವಾಗಿ ಕಂಡುಬರುತ್ತದೆ. ಉದಾಹರಣೆಗೆ 'ತಂ ವಾ ಏತಂ ವರಣಸಂತಂ ವರುಣ ಇತ್ಯಾಚಕ್ಷತೇ' ಎಂದು ವರುಣ ಶಬ್ದದ ನಿರ್ವಚನ ಗೋಪಥ ೧–೬ ರಲ್ಲಿ ಕಾಣಬಹುದು. ಮಾತಿನ ಅರ್ಥವಿವರಣೆಗೆ ತೊಡಗುವಲ್ಲಿಯೇ ಇಂಗಿತಕ್ಕೂ ಉಕ್ತಿಗೂ ಸಂಘರ್ಷವಾಗುವುದನ್ನು ಶತಪಥ ಬ್ರಾಹ್ಮಣ ೧–೪–೫–೮ ಹಾಗೂ ೧೨ ರಲ್ಲಿ ಆಖ್ಯಾನವಾಗಿ ಚಿತ್ರಿಸಿದೆ.

ಆರಣ್ಯಕಗಳು ಧ್ಯಾನ ಪರವಾದವು. ಮಂತ್ರ ಮತ್ತು ವಿಧಿಗಳನ್ನೇ ಧ್ಯಾನಕ್ಕೆ ಬಳಸುವಲ್ಲಿ ಮಂತ್ರದ ರಹಸ್ಯ ತಿಳಿಯುವ ಪ್ರಯತ್ನವಿದೆ. ಅದಕ್ಕಾಗಿ ಆ ಹೊತ್ತಿಗೆ ಬಿಡಿಬಿಡಿಯಾಗಿ ಪದಗಳನ್ನು ನುಡಿಯುವ ಪದಪಾಠ ಮೌಖಿಕ ಪರಂಪರೆಯಲ್ಲಿ ಪ್ರಮುಖವಾಯಿತು. ಪದಪಾಠವು ಸಂಧಿ ವಿಭಾಗ, ಸಮಾಸ ವಿಶ್ಲೇಷಣೆ, ಉಪಸರ್ಗವನ್ನು ಗುರುತಿಸುವುದು ಮುಂತಾದ ಸ್ಪಷ್ಟ ನಿಯಮಗಳನ್ನು ಅಪೇಕ್ಷಿಸುತ್ತವೆ. ಐತರೇಯ ಆರಣ್ಯಕದಲ್ಲಾಗಲೇ ಶಾಕಲ್ಯ, ಮಾಂಡೂಕೇಯ ಮುಂತಾದ ವೈಯಾಕರಣರ ಹೆಸರು ಉಲ್ಲೇಖಿತವಾಗಿದೆ.

ರಹಸ್ಯವಿದ್ಯೆ ಎನಿಸಿಕೊಂಡ ಉಪನಿಷತ್ತುಗಳು ಆಧ್ಯಾತ್ಮ ಪರವೂ, ತಾತ್ವಿಕ ಚಿಂತನೆಯಲ್ಲಿ ತೊಡಗಿದವೂ ಆಗಿದ್ದು, ಹಲವು ವಿಧದ ಉಪಾಸನೆಗಳನ್ನು ಹೇಳುತ್ತವೆ. ಐತರೇಯ ಉಪನಿಷತ್ತಿನ ಶಾಂತಿ ಮಂತ್ರ 'ವಾಙ್ಮೇ ಮನಸಿ ಪ್ರತಿಷ್ಠಿತಾ ಮನೋ ಮೇ ವಾಚಿ ಪ್ರತಿಷ್ಠಿತಂ' ಎಂದು ಮಾತು–ಮನಸ್ಸುಗಳ ಅವಿನಾಭಾವವನ್ನು ಹೇಳುತ್ತದೆ. ಛಾಂದೋಗ್ಯದ ಶಾಂತಿಮಂತ್ರದಲ್ಲಿ 'ಆಪ್ಯಾಯನ್ತು ಮಮಾಂಗಾನಿ ವಾಕ್ ಪ್ರಾಣಶ್ಚಕ್ಷು ಶ್ರೋತ್ರಮಥೋ ಬಲಮಿಂದ್ರಿಯಾಣಿ ಚ ಸರ್ವಾಣಿ ಸರ್ವಂ ಬ್ರಹ್ಮೋಪನಿಷದಂ' ಎಂದ ಮಾತು ತೈತ್ತಿರೀಯೋಪನಿಷತ್ತಿನ ಭೃಗುವಲ್ಲಿಯಲ್ಲಿ ವರುಣನ 'ಅನ್ನಂ ಪ್ರಾಣಂ ಚಕ್ಷುಃ ಶ್ರೋತಂ ಮನಃ ವಾಚಂ' ಎಂದು ಬ್ರಹ್ಮವನ್ನು ಹೇಳುತ್ತಿರುವಲ್ಲಿ ಪ್ರತಿಧ್ವನಿತ ವಾಗಿದೆ. ಛಾಂದೋಗ್ಯೋಪನಿಷತ್ತಿನಲ್ಲಿ ಮನುಷ್ಯನು ಪಡೆದ ತೇಜಸ್ಸಿನ ಅಣು ರೂಪವೇ ವಾಕ್ ಎಂದಿದೆ. 'ತೇಜೋಽಶಿತಂ ತ್ರೇಧಾ ವಿಧೀಯತೇ..ಯೋ ಅಣಿಷ್ಠಃ ಸಾ ವಾಕ್(೬–೫–೩)'. ಮಂತ್ರೋಚ್ಚಾರಣೆಯನ್ನೇ

ಉಪಾಸನೆಗೆ ಗುರಿಮಾಡುವ ತೈತ್ತಿರೀಯೋಪನಿಷತ್ತಿನ ಮೊದಲ ಭಾಗ ಶಿಕ್ಷಾಶಾಸ್ತ್ರದ (Phonetics) ಬಗ್ಗೆ ಮೂಲ ಸೂತ್ರವನ್ನು ಹೇಳುತ್ತದೆ. (ಮುಂದೆ 'ಶಿಕ್ಷಾ' ವಿಷಯದಲ್ಲಿ ಅದನ್ನು ಕೊಟ್ಟಿದೆ) ನಾನಾ ಉಪಾಸನೆಗಳಿಂದ ಬ್ರಹ್ಮಸಾಧನೆ ಮಾಡುವ ವಿಷಯ ಹೇಳುವ ಅರ್ವಾಚೀನ ಉಪನಿಷತ್ತುಗಳಲ್ಲಿ ನಾದಬ್ರಹ್ಮದಂತೆ 'ಶಬ್ದಬ್ರಹ್ಮ'ದ ಕಲ್ಪನೆಯೂ ಇದೆ. ಮೈತ್ರಾಯಿಣಿ ಉಪನಿಷತ್ತು 'ಶಬ್ದ ಬ್ರಹ್ಮಣಿ ನಿಷ್ಣಾತಾ ಪರಂಬ್ರಹ್ಮಾಧಿಗಚ್ಛತಿ' ಎನ್ನುತ್ತದೆ.

## ವೇದಾಂಗಗಳು ಮತ್ತು ಆಕರ ಶಾಸ್ತ್ರಗಳು

ಬ್ರಾಹ್ಮಣ ಮತ್ತು ಆರಣ್ಯಕಗಳಲ್ಲಿ 'ಪಾಠ'ದ ಬಗ್ಗೆ ಪ್ರಾರಂಭವಾದ ಚಿಂತನೆ ವೇದೋತ್ತರ ಕಾಲದಲ್ಲಿ ವೇದಾಂಗಗಳೆಂಬ 'ಶಾಸ್ತ್ರ'ಗಳಾದವು. ಅಂತಹ ಆರು ವೇದಾಂಗಗಳು– ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ ಮತ್ತು ಕಲ್ಪ. ಇವುಗಳಲ್ಲಿ ಮೊದಲ ನಾಲ್ಕು ಭಾಷಿಕ ಅಧ್ಯಯನಗಳೇ ಆಗಿವೆ. ವೇದಾಧ್ಯಯನಕ್ಕೆ ಸಂಬಂಧಿಸಿದಂತೆ ಇವು ಆರಂಭವಾದರೂ ಮುಂದೆ ಲೌಕಿಕ ಭಾಷೆಗೂ ಇದರ ವ್ಯಾಪ್ತಿ ಹರಡಿತು. ಹೀಗೆ ಅವು ಸ್ವತಂತ್ರ ಶಾಸ್ತ್ರಗಳಾದವು. ವೇದಾರ್ಥ ಶೋಧನೆಗೆ ಹೊರಟ ಮೀಮಾಂಸಾ ಶಾಸ್ತ್ರ, ತರ್ಕ (ನ್ಯಾಯ) ಶಾಸ್ತ್ರಗಳನ್ನು ವೇದದ ಉಪಾಂಗಗಳೆಂದು ಕರೆದಿದ್ದಾರೆ. ಅವು ಅರ್ಥ ಮತ್ತು ಪ್ರಾಮಾಣ್ಯದ ವಿಷಯದಲ್ಲಿ ಪ್ರಮುಖ ಅಧ್ಯಯನಗಳು.

ವೇದದ ಪಾಠ್ಯದ ತಿಳುವಳಿಕೆಗೆ ಹೊರಟ ವೇದದ ಅಂಗ ಉಪಾಂಗಗಳಾದ ಶಿಕ್ಷಾದಿ ಶಾಸ್ತ್ರಗಳು ಸ್ವತಂತ್ರ ಶಾಸ್ತ್ರಗಳಾಗಿ ಬೆಳೆದದ್ದರ ಹಿನ್ನೆಲೆಯಲ್ಲಿ, ೧) ಅನೇಕ ಲೌಕಿಕ ಶಾಸ್ತ್ರಗಳ ಹುಟ್ಟು ಮತ್ತು ಬೆಳವಣಿಗೆ, ೨) ಲೌಕಿಕ ಭಾಷೆಗಳ ಬಳಕೆ ಮತ್ತು ಬದಲಾವಣೆ ಹಾಗೂ ಅವುಗಳ ಸಾಮಾಜಿಕ ಸಂಬಂಧ, ೩) ಧಾರ್ಮಿಕ ಹಾಗೂ ಮತೀಯ ಸ್ಥಿತ್ಯಂತರಗಳು ಮತ್ತು ೪) ಶಾಸ್ತ್ರಕಾರರ ದೃಷ್ಟಿಯಲ್ಲಿನ ಒಳಭೇದಗಳೂ, ಕೆಲಸ ಮಾಡಿವೆ. ನಿಘಂಟು, ನಿರುಕ್ತಗಳು ವೇದ ಪಾಠ್ಯವನ್ನನುಸರಿಸಿದರೆ ಬೌದ್ಧ ಧರ್ಮೀಯನಾದ ಅಮರಸಿಂಹನ ಕೋಶ ಲೌಕಿಕ ಬಳಕೆಯ ನಾಮಪದಗಳ ಲಿಂಗ ನಿರ್ಣಯಕ್ಕೆ, ಲೌಕಿಕ ಶಾಸ್ತ್ರಗಳ ಪದಕೋಶವಾಗಿ ಪ್ರಮುಖವಾಗಿದೆ. ವೈದಿಕ ವ್ಯಾಕರಣದಲ್ಲಿ ಪಾಣಿನಿಗೆ ಮೇಲುಗೈಯಾದರೆ ಅದರ ಪರ್ಯಾಯ ವ್ಯಾಕರಣ ಸಂಪ್ರದಾಯಗಳೂ ಇದ್ದು ಪ್ರಾಕೃತ ಹಾಗೂ ದ್ರಾವಿಡ ದೇಶಭಾಷೆಗಳ ವ್ಯಾಕರಣದಲ್ಲಿ ಅನ್ಯ ವ್ಯಾಕರಣ ಸಂಪ್ರದಾಯಗಳನ್ನು ತಿಳಿಯ ಬಹುದಾಗಿದೆ. ಇದರಲ್ಲಿ ಜೈನರ ಶಾಸ್ತ್ರ ವ್ಯಾಸಂಗ ಬಹು ಮುಖ್ಯವಾದುದು. ಶಿಕ್ಷಾ ಮತ್ತು ಛಂದಸ್ಸುಗಳಲ್ಲಿದ್ದ ನಾದ ಪ್ರಾಧಾನ್ಯ 'ತಂತ್ರ'ದ ಮುಖೇನ ಪ್ರಸಿದ್ಧ ಶಬ್ದಾರ್ಥ ಸಂಬಂಧಕ್ಕಿಂತ ಭಿನ್ನವಾದ ಲಯಗಾರಿಕೆಗೂ ಮನೋವೃತ್ತಿಗಳಿಗೂ ಅನುಭಾವ ಯೋಗ್ಯ ಸಂಬಂಧವನ್ನು ಸೂಚಿಸಿದವು. ಆಯುರ್ವೇದ, ಯೋಗಶಾಸ್ತ್ರಗಳಲ್ಲಿ ವಾಕ್‌ದೋಷ ಮತ್ತು ಅದರ ಪರಿಹಾರ ಕುರಿತ ಸಲಹೆ ಸೂಚನೆಗಳೂ ಧರ್ಮಶಾಸ್ತ್ರ, ಭಗವದ್ಗೀತೆ ಮತ್ತು ಅದರ ವ್ಯಾಖ್ಯಾನಗಳಲ್ಲಿನ

ವಾಙ್ಮಯ ತಪಸ್ಸಿನ ಪ್ರಸ್ತಾಪ ಇವೆಲ್ಲ ವಾಕ್ ಅನ್ನು ಕಾಯ–ಮನಸ್ಸುಗಳ ಮಧ್ಯದ, ಅದರಿಂದಲೇ ಅವೆರಡರ ಗುಣಲಕ್ಷಣ ಹೊತ್ತ ಮನಃಕಾಯ* ರೂಪವಾಗಿ ಪ್ರಸ್ತಾಪಿಸಿರುವುದು ಕುತೂಹಲಕಾರಿ. ವೇದ ಮೀಮಾಂಸೆಯಂತೆ ವೇದಾಂತ ಮೀಮಾಂಸೆಯೂ ವೇದ/ಉಪನಿಷತ್ತಿನ ಅರ್ಥವನ್ನೂ, ಪ್ರಾಮಾಣ್ಯವನ್ನೂ ಚರ್ಚಿಸಿದರೂ, ಬೌದ್ಧ ದರ್ಶನದ ಅಪೋಹವಾದ ವೇದಾರ್ಥ ಗ್ರಹಣದಲ್ಲಿ ಅದ್ವೈತಿಗಳನ್ನು ಪ್ರಭಾವಿಸಿದಂತೆ ಕಾಣುವುದು. ದರ್ಶನ, ಶಾಸ್ತ್ರಗಳಲ್ಲಿನ ಬೆಳವಣಿಗೆ, ಭಿನ್ನ ದೃಷ್ಟಿಗಳು ಭಾಷಾತತ್ವವನ್ನು ಕುರಿತ ಶಾಸ್ತ್ರದಲ್ಲೂ ಪ್ರಭಾವ ಬೀರಿವೆ. ಭಾಷಾಧ್ಯಯನದಲ್ಲಿ ಪದ (ವ್ಯಾಕರಣ ಶಾಸ್ತ್ರ) ವಾಕ್ಯ, (ಮೀಮಾಂಸಾ) ಪ್ರಮಾಣ (ತರ್ಕ) ಶಾಸ್ತ್ರಗಳೇ ಪ್ರಧಾನವಾದರೂ ಮಾತಿನ ಸೌಂದರ್ಯ ಕುರಿತ ಚರ್ಚೆಯಾದ ಅಲಂಕಾರ ಶಾಸ್ತ್ರ ಅದರ ನಾಲ್ಕನೇ ಆಯಾಮವೆಂದು ಕುಂತಕನು ಹೇಳಿದ್ದು ಅಲಂಕಾರಶಾಸ್ತ್ರವೂ ಭಾಷಾಧ್ಯಯನದ ಪರಿಧಿಗೆ ಬರುತ್ತದೆ.

ಹೀಗೆ ಛಂದಸ್ಸು, ಶಿಕ್ಷಾ, ವ್ಯಾಕರಣ, ನಿರುಕ್ತ (ನಿಘಂಟು), ಮೀಮಾಂಸ, ತರ್ಕ ಮತ್ತು, ಅಲಂಕಾರಗಳಲ್ಲಿ ಕ್ರಮವಾಗಿ ಭಾಷೆಯ ಲಯ, ಅಕ್ಷರ, ಪದ, ಪದದ ಅರ್ಥ, ವಾಕ್ಯ ಶಬ್ದದ ಪ್ರಾಮಾಣ್ಯ ಪ್ರಮುಖವಾಗಿ ಚರ್ಚಿತವಾಗಿವೆ. ಇವಲ್ಲದೆ ಬೌದ್ಧ, ಜೈನ, ತಂತ್ರ ಮತ್ತು ಯೋಗಶಾಸ್ತ್ರಗಳಲ್ಲಿ ವಾಕ್‌ನ ತತ್ವ ಮತ್ತು ಅನುಸಂಧಾನಗಳ ಪ್ರಾಸಂಗಿಕ ಚರ್ಚೆಗಳಿವೆ.

### ಛಂದಸ್ಸು

ವೇದವನ್ನು ನಾದಾತ್ಮಕವೆಂದು, 'ಶ್ರುತಿ' ಎಂದು ಕರೆದಿದೆ. ಹಾಗೆಯೇ ಛಂದಸ್ ಎನ್ನುವುದೂ ಇದಕ್ಕೆ ಪರ್ಯಾಯ ಪದ. ಋಗ್ವೇದ ಕಾಲಕ್ಕೆ ಅಕ್ಷರಮೂಲವಾದ ನಾದ ವಿನ್ಯಾಸಗಳು ಸೀಮಿತವಾಗಿದ್ದವು. ವೇದಗಳಲ್ಲೆಲ್ಲ ಅಕ್ಷರ ವಿನ್ಯಾಸದ ಜತೆಗೆ ಉದಾತ್ತ–ಅನುದಾತ್ತ–ಸ್ವರಿತವೆಂಬ ಸ್ವರಗಳು ಪ್ರಮುಖವಾಗಿದ್ದವು. ವೈದಿಕ ಛಂದಸ್ಸು ಅಕ್ಷರ ಗಣನೆಯನ್ನಾಧರಿಸಿದೆ. ಎಂಟಕ್ಷರ ಮೂರು ಪಾದಗಳ ಗಾಯತ್ರಿ, ನಾಲ್ಕು ಪಾದಗಳಲ್ಲಿ ಹನ್ನೊಂದಕ್ಷರದ ತ್ರಿಷ್ಟುಪ್, ಹನ್ನೆರಡಕ್ಷರದ ಜಗತಿ ವ್ಯಾಪಕವಾಗಿ ಕಂಡುಬರುವ ಪ್ರಸಿದ್ಧ ಛಂದಸ್ಸುಗಳು. ರಾಮಾಯಣದ ಮೂಲದಲ್ಲಿರುವ ಅನುಷ್ಟುಪ್ ಛಂದಸ್ಸಿನ ಅವತರಣ ವೈದಿಕ ಭಾಷೆಯಿಂದ ಲೌಕಿಕ ಸಂಸ್ಕೃತಕ್ಕೆ ಕಾವ್ಯವು ಅವತರಿಸಿದ್ದರ ಸೂಚನೆ. ವರ್ಣ–ಪೂರ್ವ ಆವಸ್ಥೆಯಾದ ಲಯ, ಭಾವ ಬೋಧಕವೆಂದು ಕಾವ್ಯದಲ್ಲಿ ಅದಕ್ಕೆ ವಿಶೇಷ ಸ್ಥಾನ. ನಾಟ್ಯಶಾಸ್ತ್ರವು ಈ ಸಂಬಂಧವನ್ನೂ, ಲೌಕಿಕ ವೃತ್ತಗಳನ್ನೂ ತಿಳಿಸುತ್ತದೆ. ಪಿಂಗಳನ ಛಂದಸ್‌ಶಾಸ್ತ್ರದಲ್ಲಿ ವೈದಿಕ ಪರಂಪರೆಯ ಛಂದಸ್ಸನ್ನೂ ಭರತನಲ್ಲಿ ಲೌಕಿಕ ಪರಂಪರೆಯ ಛಂದಸ್ಸನ್ನೂ ಕಾಣಬಹುದೆನ್ನಲಾಗಿದೆ. ಪ್ರಾಕೃತದಲ್ಲಿ ಮಾತ್ರ ವೃತ್ತಗಳು ಪ್ರಸಿದ್ಧವಾಗಿ ಸಂಸ್ಕೃತವನ್ನು ಪ್ರಭಾವಿಸಿವೆ. ದ್ರಾವಿಡ ಭಾಷೆಗಳಲ್ಲಿ ಅಂಶಗಣ ವಿಶಿಷ್ಟ

---

* ಸಂಸ್ಕೃತದಲ್ಲಿ ಮನಃಕಾಯ, ಬೌದ್ಧರಲ್ಲಿ ಪಾಲಿಯಿಂದ ಬಂದ ರೂಪ ಮನೋಕಾಯ.

ವಾಗಿದೆ. ಭಾರತೀಯ ಭಾಷೆಗಳಲ್ಲಿನ ಅಕ್ಷರಗಣ, ಮಾತ್ರಾಗಣ, ಅಂಶಗಣಗಳು ಆಯಾ ಭಾಷೆಯ ವಿಶೇಷತೆಗಳಾಗಿವೆ. ಈ ನಿಟ್ಟಿನಲ್ಲಿ ಪಾಣಿನೀಯ ಶಿಕ್ಷಾ ಶಾಸ್ತ್ರದಲ್ಲಿ ಛಂದಸ್ಸು ವರ್ಣಬಾಯಿಗೆ ಬರುವ ಮೊದಲೇ ಹುಟ್ಟುತ್ತದೆ ಎಂಬ ಮಾತು ಸ್ವಾರಸ್ಯಕರ (ಮಾರುತಸ್ತೂರಸಿ ಚರನ್ ಮನ್ದ್ರಂ ಜನಯತಿ ಸ್ವರಮ್; ಪ್ರಾತಃ ಸವನ ಯೋಗಂ ತಂ ಛಂದೋ ಗಾಯತ್ರಮಾಶ್ರಿತಮ್ .....ಇ...) ಆದ್ದರಿಂದ ಮನೋವಿವಕ್ಷೆಗೆ ಅನುಗುಣವಾಗಿ ಮೊದಲು ಛಂದಸ್ಸು, ಆನಂತರ ವರ್ಣವೆಂಬ ಕ್ರಮವನ್ನು ಶಿಕ್ಷಾ ಮತ್ತು ಛಂದಸ್ಸುಗಳು ಹೇಳಿವೆ.

## ಶಿಕ್ಷಾಶಾಸ್ತ್ರ ಮತ್ತು ಪ್ರಾತಿಶಾಖ್ಯೆಗಳು

ಭಾಷೆಯ ಮೂಲ ಘಟಕಗಳಾದ ವರ್ಣಗಳನ್ನೂ ಅದರ ಹಿಂದಿನ ಸೂಕ್ಷ್ಮತೆಗಳ ವಿಶ್ಲೇಷಣೆಯನ್ನೂ ಶಿಕ್ಷಾಶಾಸ್ತ್ರ ಒಳಗೊಳ್ಳುತ್ತದೆ. ತೈತ್ತಿರೀಯ ಉಪನಿಷತ್ತಿನಲ್ಲಿ ಮಂತ್ರೋಚ್ಚಾರಣೆಯ ಉಪಾಸನೆಗೆ ಪೂರ್ವಭಾವಿಯಾಗಿ ಈ ವಿಶ್ಲೇಷಣೆಯ ಉಲ್ಲೇಖ ಹೀಗಿದೆ : 'ವರ್ಣಸ್ವರ ಃ। ಮಾತ್ರಾಬಲಂ। ಸಾಮ ಸಂತಾನ ಃ। ಇತ್ಯುಕ್ತಃ ಶೀಕ್ಷಾ ಧ್ಯಾಯಃ।' ನಿಗದಿತ ಭಾಷೆಯ ಮೂಲದ್ರವ್ಯವಾದ ಅಕ್ಷರಗಳ ಮೊತ್ತ ಒಂದೇ ಆದ್ದರಿಂದ ಆಯಾ ಭಾಷೆಯ ಅವಿನಾಶಿ ಮೂಲದ್ರವ್ಯ ಅಕ್ಷರ. ಇದೇ ಶಬ್ದವನ್ನು ತೋರುವುದರಿಂದ ಇದಕ್ಕೆ ವರ್ಣ ಎಂದು ಹೆಸರು. 'ಆತ್ಮ ಬುದ್ಧಿಯ ಜತೆ ಸೇರಿ ಮನಸ್ಸು ಅರ್ಥವನ್ನು ಹೇಳುವ ಇಚ್ಛೆಯಿಂದ ದೇಹದ ಕಾವನ್ನು ತಾಗಿ ಅದು ಗಾಳಿಯನ್ನು ದೂಡುತ್ತದೆ. ಆ ಪ್ರಾಣ ಎದೆಯಿಂದ ಬರುತ್ತಾ ಸ್ವರವನ್ನು ಹುಟ್ಟಿಸುತ್ತದೆ. ಹಾಗೆ ಹೊರಗೆ ಬರುತ್ತಾ ಮೂರ್ಧಾ ಇಂದ ಮೇಲೆ ಹೋಗುವುದನ್ನು ತಡೆದು ಬಾಯಿಗೆ ಬಂದಾಗ ಅಲ್ಲಿನ ಬೇರೆ ಭಾಗಗಳಿಗೆ ನಾಲಿಗೆ ತಗುಲಿ ವರ್ಣಗಳ ಸೃಷ್ಟಿಯಾಗುತ್ತದೆ.' (ಪಾಣಿನೀಯ ಶಿಕ್ಷಾ) ಈ ವರ್ಣಗಳಲ್ಲಿ ಸ್ವತಂತ್ರವಾಗಿ ಉಚ್ಚಾರವಾಗುವ ಸ್ವರಗಳು, ಸ್ವರದ ಸಹಾಯ ಪಡೆದು ಉಚ್ಚಾರ ಮಾಡುವ ವ್ಯಂಜನಗಳು ಎಂದು ಎರಡು ವಿಧ. ಸ್ವರಗಳ ಉಚ್ಚಾರಣೆಯಲ್ಲಿ ಗಂಟಲಲ್ಲಿನ ಸ್ಥಾನ ಪಲ್ಲಟದಿಂದ ಆಗುವ ಉದಾತ್ತ ಅನುದಾತ್ತ ಮುಂತಾದ ಏರಿಳಿತಗಳಿಗೂ 'ಸ್ವರ'ವೆಂದೇ ಹೆಸರು (ಇದು ಸಂಗೀತದ ಸ್ವರ) ಈ ಸ್ವರಗಳಿಗೆ ಕಾಲಗತಿಯ ಲಯದ ಲೆಖ್ಖಾಚಾರ ಕೊಡುವುದು ಮಾತ್ರಾ. ಇವನ್ನೆಲ್ಲಾ ನಿಯಂತ್ರಿಸುವ ಶ್ವಾಸದಲ್ಲಿನ ಪ್ರಯತ್ನ ಬಲ, ಆ ಪ್ರಯತ್ನದಲ್ಲಿನ ಸಮತೆಯನ್ನು ಕಾಪಾಡುವ ನಾಭಿಯಿಂದ ಬರುವ ಸಮತೋಲನ ಸಾಮ. ವರ್ಣಗಳು ಸ್ವರಗಳಾಗಿ ಗುಂಪುಗೂಡಿ, ಪದಗಳು ವಾಕ್ಯಗಳಾಗಿ ಗುಂಪುಗೂಡಿ ಅರ್ಥವನ್ನು ಸ್ಫುರಿಸುವಂತೆ ಮಾಡುವ ಮನಸ್ಸಿನ ಲಯ– ಸಂತಾನ, ಹೀಗೆ ಮನಸ್ಸು ನಾಭಿ, ಶ್ವಾಸಗಳಿಂದ ಹೊರಟ ಧ್ವನಿ ಎದೆ, ಗಂಟಲು, ಶಿರಗಳಲ್ಲಿ ಮತ್ತು ನಾಲಿಗೆ ತುದಿಯಲ್ಲಿ ತಡೆದು ಹಲ್ಲು ತುಟಿ, ಬಾಯಿ ಅಂಗಳಗಳಿಗೆ ನಾಲಿಗೆ ತಗುಲಿದಾಗ ವರ್ಣ ಉತ್ಪನ್ನವಾಗುತ್ತದೆ. ಆದರೆ ವರ್ಣ ವಿಭಾಗ ಕಾರಕವಾದವು ಕಂಠ, ತಾಲು, ಮೂರ್ಧಾ (ಒಸಡು), ದಂತ ಮತ್ತು ತುಟಿಗಳು.

ಕೆಲವು ವರ್ಣಗಳ ಉಚ್ಚಾರಣೆಗೆ ಮೂಗನ್ನು ಬಳಸುವುದಿದೆ. ಅವುಗಳಿಗೆ ಅನುನಾಸಿಕವೆಂದು ಹೆಸರು ಅನುನಾಸಿಕ, ಕಂಪ, ಯೋಗವಾಹಗಳ (ಅನುಸ್ವಾರ, ವಿಸರ್ಗ ಇತ್ಯಾದಿ) ಉಚ್ಚಾರಣೆಯನ್ನು ಅನುಪ್ರಧಾನವೆನ್ನಲಾಗಿದೆ. ಅನುನಾಸಿಕ ಸಹಿತ ಯ, ವ ಕಾರಗಳೂ, ಸ್ವರಗಳೂ ಬರವಣಿಗೆಯಲ್ಲಿ ಕಂಡುಬರುವುದಿಲ್ಲ. ಉದಾತ್ತಾದಿ ಸ್ವರಗಳು ವೇದಕಾಲಕ್ಕೆ ನಿಗದಿತವಾಗಿದ್ದು ಮುಂದೆ ಅನಿಯತವಾದವು. ಬರವಣಿಗೆಯೇ ಪ್ರಧಾನವಾದ ಶಾಸ್ತ್ರೀಯ ಭಾಷೆಗಳಲ್ಲಿ ಉಚ್ಚಾರಣೆಯ ಚರ್ಚೆ ಅಪ್ರಧಾನವಾಯಿತು. ವ್ಯಾಕರಣವು ಅಕ್ಷರ ಸಮಾಮ್ನಾಯದ ನಂತರ ವರ್ಣಗಳು ಪರಸ್ಪರ ಸೇರುವ ಸಂಧಿನಿಯಮಗಳಿಂದ ಮುಂದೆಯೇ ಚರ್ಚೆ ನಡೆಸಿದವು. ಇದರಿಂದಾಗಿ ಶಿಕ್ಷಾಶಾಸ್ತ್ರ ಪ್ರಮುಖವಾಗಿ ವೇದಾಂಗವಾಗಿಯೇ ಚಾಲ್ತಿಯಲ್ಲಿದ್ದರೂ ವೈಯ್ಯಾಕರಣಿಗಳಿಗೂ ಅದರ ನಂಟು ಇದೆ. ವ್ಯಾಕರಣ ಬರೆದ ಪಾಣಿನಿಯ ಹೆಸರಿನಲ್ಲಿರುವ ಪಾಣಿನೀಯ ಶಿಕ್ಷಾ ಇಂತಹ ಒಂದು ಪುಟ್ಟ ಕೃತಿಯಾದರೆ, ನಾರದೀಯ, ವಾಸಿಷ್ಠೀ ಮುಂತಾದ ಮೂವತ್ತೆರಡು ಶಿಕ್ಷಾಗ್ರಂಥಗಳು ಭಿನ್ನ ವೈದಿಕ ಪರಂಪರೆಗಳನ್ನೇ ಸೂಚಿಸುತ್ತವೆ. ಇವೆಲ್ಲವೂ ಪ್ರಾತಿಶಾಖ್ಯೆಗಳನ್ನು ಆಧರಿಸಿವೆ. ಇಂತಹ ವೈದಿಕ ಶಿಕ್ಷಾ ಒಂದಾದರೆ, ಪ್ರಾಕೃತ ವ್ಯಾಕರಣಗಳನ್ನು ಬರೆಯುವ ಕಾಲಕ್ಕೆ ಅವನ್ನು ಸಂಸ್ಕೃತ ಜನ್ಯವೆಂದೇ ಭಾವಿಸಿ, ಭಿನ್ನ ಪ್ರಾಕೃತಗಳು ಉಚ್ಚಾರಣೆಯ ವ್ಯತ್ಯಾಸದಿಂದಲೇ ಆಗುವುದೆಂದು ಸಂಸ್ಕೃತದಿಂದ ಪ್ರಾಕೃತಕ್ಕೆ ಆಗುವ ವರ್ಣಪಲ್ಲಟಗಳ ಸುದೀರ್ಘ ಚರ್ಚೆ ನಡೆದಿದೆ. ಇದರ ಆರಂಭ ವರರುಚಿಯ ಹೆಸರಿನಲ್ಲಿರುವ ಪ್ರಾಕೃತಪ್ರಕಾಶದಲ್ಲಿದೆ. ಇವು ವರ್ಣ ವ್ಯತ್ಯಯ ಅಥವಾ phonetic change ಬಗ್ಗೆ ನಡೆದ ಅಧ್ಯಯನ ಎಂದು ಗುರುತಿಸಬಹುದು. ಇವೇ ಮುಂದೆ ತದ್ಭವಗಳ ವಿಚಾರವಾಯಿತು.

**ಪ್ರಾತಿಶಾಖ್ಯೆಗಳು :**

ಸಂಸ್ಕೃತ ಶಿಕ್ಷಾಶಾಸ್ತ್ರವು ಪ್ರಾತಿಶಾಖ್ಯೆಗಳನ್ನು ಆಧರಿಸಿತ್ತೆಂದು ಹೇಳಿದೆ. ಈ ಪ್ರಾತಿ ಶಾಖ್ಯೆಗಳು ವೇದದ ಪ್ರತಿಶಾಖೆಗೂ ಅನ್ವಯಿಸಿದಂತಿರುವ ಶಿಕ್ಷಾ ಮತ್ತು ವ್ಯಾಕರಣ ಸಂಬಂಧಿಯಾದ ಅತ್ಯಂತ ಪ್ರಾಚೀನ ಗ್ರಂಥಗಳು. ಋಗ್ವೇದಕ್ಕೆ ಶೌನಕೀಯ, ಶುಕ್ಲ ಯಜುರ್ವೇದಕ್ಕೆ ಕಾತ್ಯಾಯನ, ಕೃಷ್ಣ–ಯಜುರ್ವೇದಕ್ಕೆ ತೈತ್ತಿರೀಯ, ಸಾಮವೇದಕ್ಕೆ ಪೌಷ್ಪ, ಅಥರ್ವಣ ವೇದಕ್ಕೆ ಶೌನಕೀಯ ಎಂಬ ಪ್ರಾತಿಶಾಖ್ಯೆಗಳು ಪ್ರಚಾರದಲ್ಲಿವೆ. ಪ್ರಾತಿಶಾಖ್ಯೆಯಲ್ಲಿನ ಉಚ್ಚಾರ ಭೇದಗಳು, ಅದರಿಂದಾಗುವ ಸಂಧಿ, ಛಂದಸ್ಸುಗಳ ಪಲ್ಲಟ, ಕೆಲವೊಮ್ಮೆ ಅರ್ಥವ್ಯತ್ಯಯ, ಉಚ್ಚಾರಣೆಗೆ ಸಹಾಯಕವಾದ ಕರವಿನ್ಯಾಸ ಮುಂತಾದ ವಿವರಣಾತ್ಮಕ ಪ್ರಮೇಯಗಳೂ ಕೆಲವು ರಹಸ್ಯಗಳೂ ಈ ಪ್ರಾತಿಶಾಖ್ಯೆ ಗಳಲ್ಲಿ ಕಂಡುಬರುತ್ತವೆ. ಇದು ಸೂತ್ರರೂಪವಾಗಿದ್ದರೂ ಸೂತ್ರ–ಬದ್ಧ ಶಾಸ್ತ್ರ ಪ್ರಕ್ರಿಯೆಯ ಪೂರ್ವಸ್ಥಿತಿ.

## ವ್ಯಾಕರಣಗಳು

ಅಕ್ಷರಗಳು ಅರ್ಥವತ್ತಾಗಿ ಕೂಡಿಕೊಂಡಾಗ ಶಬ್ದವೂ ಆ ಶಬ್ದಗಳು ಪರಸ್ಪರ ಕೂಡಿಕೊಳ್ಳುವ ಸಾಮರ್ಥ್ಯ ಪಡೆದಾಗ ಪದವೂ ಸಿದ್ಧವೆಂದು ಹೇಳುತ್ತಾರೆ. ಇದನ್ನು ಕುರಿತ ಶಾಸ್ತ್ರ ವ್ಯಾಕರಣವನ್ನು ಪದಶಾಸ್ತ್ರ ಅಥವಾ ಶಬ್ದ ಶಾಸ್ತ್ರವೆಂದು ಕರೆಯುವುದು ವಾಡಿಕೆ. ಅರ್ಥ ಪೋತ್ತ್ರಮಾತಿನ ಅತ್ಯಂತ ಪ್ರಮುಖ ವಿಶ್ಲೇಷಣೆ ಇದು. 'ಪ್ರಥಮೇ ಹಿ ವಿದ್ವಾಂಸೋ ವೈಯ್ಯಾಕರಣಾಃ' ಎಂದು ಶಾಸ್ತ್ರಗಳಲ್ಲಿಯೇ ಅದಕ್ಕೆ ಮೊದಲ ಸ್ಥಾನ. ವ್ಯಾಕರಣವನ್ನು 'ಅಥಶಬ್ದಾನುಶಾಸನಂ' ಎಂದು ಶಾಸನವನ್ನಾಗಿಯೇ ಕೊಡುತ್ತ ಬಂದಿದ್ದಾರೆ.

ಅರ್ಥವತ್ತಾದ ಕೆಲವು ಮೂಲ ಅಕ್ಷರದ ಗುಂಪುಗಳಿದ್ದು ಅವುಗಳಿಗೆ ಕ್ರಿಯಾ ಅಥವಾ ನಾಮಸೂಚಕ ಪ್ರತ್ಯಯಗಳನ್ನು ಸೇರಿಸಿದಾಗ 'ಪದ' ಆಗುವುದು (ಸುಪ್ತಿಙನ್ತಂ ಪದಂ) ಎಂದು ಬಹುಮತದ ಅಭಿಪ್ರಾಯ. ಹೀಗೆ ಮೂಲ ನಾಮ ಅಥವಾ ಕ್ರಿಯಾ ಪದಗಳಲ್ಲದೆ ಕೃತ್, ತದ್ಧಿತ, ಸಮಾಸಗಳೆಂಬ ಮೂರು ವೃತ್ತಿಗಳಾಗಿ ಪ್ರಧಾನವಾಗಿವೆ. ಕೃತ್ ಎಂದರೆ ಕ್ರಿಯಾಪದವನ್ನು ನಾಮಪದ (ಅಥವಾ ಅವ್ಯಯವಾಗಿ) ಬದಲಾಯಿಸಲು ಕೆಲವು ಪ್ರತ್ಯಯಗಳನ್ನು ಸೇರಿಸುವುದು : ತದ್ಧಿತ ಒಂದು ನಾಮಪದದಿಂದ ಇನ್ನೊಂದು ನಾಮಪದವನ್ನು ಸಾಧಿಸುವುದು ; ಸಮಾಸವೆಂದರೆ ಎರಡು ನಾಮಪದಗಳನ್ನು ಒಟ್ಟಿಗೆ ಸೇರಿಸುವುದು. ಇವಲ್ಲದೆ ಸಹಜವಾದ ಮತ್ತು ಕೃತ್ ಪ್ರತ್ಯಯದಿಂದ ಸಾಧಿತವಾದ ಅವ್ಯಯಗಳೂ ಇವೆ. ಈ ಎಲ್ಲ ಪ್ರತ್ಯಯಗಳೂ ಪದಗಳ ಪರಸ್ಪರ ಸಂಬಂಧ ಸೂಚಕವಾಗಿದ್ದು, ಆ ಪ್ರತ್ಯಯಗಳಿಂದ ಶಬ್ದದ ಅರ್ಥವಲ್ಲದೆ ಒಟ್ಟು ಕಲ್ಪನೆಯ ಬಗ್ಗೆ ಒಂದು 'ಆಕಾಂಕ್ಷೆ'ಯನ್ನು ಹುಟ್ಟಿಸುತ್ತವೆ. ಪೂರ್ಣ ಕ್ರಿಯಾ ಪದದಲ್ಲಿಯೇ ಆ ಆಕಾಂಕ್ಷೆ ಪೂರ್ಣಗೊಳ್ಳುವುದು. ಹೀಗೆ ಆಕಾಂಕ್ಷೆ ಪೂರ್ಣಗೊಂಡ ಮಾತೇ ವಾಕ್ಯ ಆದ್ದರಿಂದ ಅಕ್ಷರ ಜೋಡಣೆ (ಸಂಧಿ), ಪ್ರತ್ಯಯಗಳನ್ನು ಸೇರಿಸಿ ಧಾತುಗಳಿಂದ ಪದಗಳನ್ನು ರಚಿಸುವುದು (ಸುಬಂತ, ತಿಙನ್ತ, ಕೃದಂತ, ತದ್ಧಿತ, ಸಮಾಸಗಳು) ಕ್ರಿಯಾ ಪದಕ್ಕೆ ಅನ್ವಯವಾಗುವ ಅರ್ಥವತ್ತತೆ (ಕಾರಕ) ಇವು ವ್ಯಾಕರಣದ ಮುಖ್ಯ ಪ್ರಕ್ರಿಯೆಗಳು. ಈ ಪ್ರಕ್ರಿಯೆಗಳ ನಿಯಮ (ಸೂತ್ರ)ಗಳಿಗೆ ಸಂಬಂಧಿಸಿದ ಸೂತ್ರಪಾಠವನ್ನೇ ವ್ಯಾಕರಣವೆಂದು ಅದನ್ನು ಶಬ್ದಾನುಶಾಸನ ಎಂದೂ ಕರೆದಿದ್ದಾರೆ. ಆದರೆ ಈ ಪ್ರಕ್ರಿಯೆಗೆ ಮೂಲದಲ್ಲಿ ಧಾತುಗಳಿದ್ದು ಆ ಧಾತುಗಳ ಪಟ್ಟಿ-ಧಾತು ಪಾಠ, ಉ(ಉಣ್)ನಿಂದ ಆರಂಭವಾದ ಕೆಲವು ಕೃದಂತ ಸಂಬಂಧಿ ಪ್ರತ್ಯಯಗಳ ಉಣಾದಿ ಪಾಠಗಳೂ, ಸೂತ್ರಪಾಠಕ್ಕೆ ಪೂರಕವಾದವು. ಇದರ ಜೊತೆಗೆ ಸಮಾನ ವ್ಯಾಕರಣ ರೂಪ ಹೊಂದುವ ಪ್ರಾತಿಪದಿಕಗಳ ವರ್ಗೀಕರಣವಾದ ಗಣಪಾಠ (ತ್ಯದಾದಿ, ಯವಾದಿ ಮುಂತಾಗಿ) ಪೂರಕ ಸಾಮಗ್ರಿಯೇ. ಸಂಸ್ಕೃತದಲ್ಲಿ ಲಿಂಗ ನಿರ್ಣಯ ಪ್ರಾಚೀನ ಪುರಾಣ ಕಲ್ಪನೆಗಳನ್ನಾಧರಿಸಿದ್ದು ಸ್ಪಷ್ಟವಾದ ಅರ್ಥ-ಆಧಾರಿತ ಲಿಂಗ ನಿರ್ಣಯ ಸಾಧ್ಯವಿಲ್ಲ. ಆದ್ದರಿಂದ ಲಿಂಗಾನುಶಾಸನವನ್ನು ಪಟ್ಟಿ ಮಾಡಿದ್ದಾರೆ. ಹೀಗೆ

ಸೂತ್ರಪಾಠ, ಉಣಾದಿಪಾಠ, ಧಾತುಪಾಠ, ಗಣಪಾಠ, ಲಿಂಗಾನುಶಾಸನವೆಂಬ ಪಂಚ ಅಂಗಗಳುಳ್ಳದ್ದು ವ್ಯಾಕರಣ ಎಂಬ ಅಭಿಪ್ರಾಯವಿದೆ.*

ಲಿಂಗಾನುಶಾಸನ, ಗಣಪಾಠ ಮುಂತಾದ ಕಡೆ ಸಿದ್ಧವೂ ಪ್ರಸಿದ್ಧವೂ ಆದ ಶಬ್ದಗಳ ಪಟ್ಟಿಯೂ ಅದರ ಪ್ರಕ್ರಿಯೆಯೂ ಇರುವುದನ್ನು ಗಮನಿಸಿ, ಆಯಾ ರೂಪಸಿದ್ಧಿಗೆ ಸಂಬಂಧಿಸಿದ ಸೂತ್ರರಚನೆ ಸವಿಭಕ್ತ ವ್ಯಾಕರಣವೆನ್ನಿಸಿದೆ. ಆದರೆ ಈ ಶಬ್ದ–ಪದಗಳ ರಚನೆಯ ಹಿಂದೆ ಇರುವ ತಾತ್ವಿಕ ಚಿಂತನೆಗಳನ್ನು ಬೆಳೆಸಿ ಮನಸ್ಸಿನಲ್ಲಿ ಮೂಡುವ ಮಾತಿನ (ಪದ–ವಾಕ್ಯಗಳ) ಅಖಂಡತೆಯ ಕಡೆಗೆ ಗಮನ ಹರಿಸುವ ವ್ಯಾಕರಣ ಅವಿಭಕ್ತವ್ಯಾಕರಣ ಇವುಗಳನ್ನು ಇಂದ್ರ ಮತ್ತು ಬಾರ್ಹಸ್ಪತ್ಯ ಶಾಖೆಗಳೆಂದು ಭರ್ತೃಹರಿ ಸೂಚಿಸಿದ್ದಾನೆ. ಇವೆರಡೂ ಹೊಯ್ ಕೈಯಾಗಿ ಬೆಳೆದ ವ್ಯಾಕರಣ ಪರಂಪರೆಗಳು ಸವಿಭಕ್ತವ್ಯಾಕರಣ ಪರಂಪರೆಗೂ ಐಂದ್ರ ಮಾಹೇಶ್ವರ ಎಂಬ ಎರಡು ಪ್ರಧಾನ ಧಾರೆಗಳಿವೆ.

ಇಂದ್ರಶ್ಚಂದ್ರಃ ಕಾಶಕೃತ್ಸ್ನ ಆಪಿಶಲೇ ಶಾಕಟಾಯನಃ।
ಪಾಣಿನ್ಯಮರ ಜೈನೇಂದ್ರ ಜಯತ್ಯಷ್ಟಾದಿಶಾಬ್ದಿಕಾಃ॥

ಎಂದು ಎಂಟು ವೈಯ್ಯಾಕರಣಿಗಳು ಪ್ರಸಿದ್ಧರು. ಹನುಮಂತನನ್ನು ನವ ವ್ಯಾಕರಣ ಪಾಂಡಿತ ಎಂದು ಕರೆದಿದ್ದೂ ಇದೆ. ಇವು ವ್ಯಾಕರಣದ ಬಹುಮುಖತ್ವವನ್ನು ತೋರಿಸುತ್ತವೆ.

### ಪಾಣಿನೀಯ

ಸುಮಾರು ಕ್ರಿ.ಪೂ. ೭ನೇ ಶತಮಾನದ ಪಾಣಿನಿಯ 'ಅಷ್ಟಾಧ್ಯಾಯಿ' (ಎಂಟು ಅಧ್ಯಾಯಗಳ ಗ್ರಂಥ) ವ್ಯಾಕರಣದಲ್ಲಿಯೇ ಉಪಲಬ್ಧವಾದ ಅತ್ಯಂತ ಪ್ರಾಚೀನವೂ ಪ್ರೌಢವೂ ಆದ ಕೃತಿ. ಇದು ಮಾಹೇಶ್ವರ ಪಂಥದ್ದು. ಅವನಿಗಿಂತ ಹಿಂದೆ ಐಂದ್ರ (ಇಂದ್ರನ) ವ್ಯಾಕರಣವಿತ್ತೆಂದು ಹೇಳಿದೆ. ಅಲ್ಲದೆ ಪಾಣಿನಿಯೇ ಶಾಕಲ್ಯ, ಕಾಶಕೃತ್ಸ್ನ ಮುಂತಾದ ಹನ್ನೆರಡು ವೈಯ್ಯಾಕರಣಿಗಳ ಅಭಿಪ್ರಾಯವನ್ನು ಪ್ರಸಂಗವಶಾತ್ ಉದ್ಧರಿಸುತ್ತಾನೆ. ಪಾಣಿನಿಯ ನಂತರದಲ್ಲಿ ಕಾತ್ಯಾಯನ್ಯವರರುಚಿ ಸು.ಕ್ರಿ.ಪೂ. ೪ ರಿಂದ ೨ನೇ ಶತಮಾನದಲ್ಲಿ ವಾರ್ತಿಕಗಳನ್ನೂ, ಸು.ಕ್ರಿ.ಪೂ. ೨ನೇ ಶತಮಾನದಲ್ಲಿ ಪತಂಜಲಿ ಮಹಾಭಾಷ್ಯವನ್ನೂ ಬರೆದು ಪಾಣಿನೀಯ ವ್ಯಾಕರಣಕ್ಕೆ ಭದ್ರವಾದ ವ್ಯವಸ್ಥಾಪನೆ ಮಾಡಿದರು. ಅಲ್ಲಿಂದ ಮುಂದೆ ಪಾಣಿನೀಯ ವ್ಯಾಕರಣವೇ ಅತ್ಯಂತ ಪ್ರಸಿದ್ಧವಾಗಿ 'ಕಾಶಿಕಾ'ದಂತಹ ಸೂತ್ರ ವೃತ್ತಿಗಳು. ಅಷ್ಟಾಧ್ಯಾಯಿಯನ್ನಾಧರಿಸಿದ ಪ್ರಕ್ರಿಯಾ ರೂಪಗಳೂ ಅನೇಕವು ಹುಟ್ಟಿಕೊಂಡವು. ಪ್ರಕ್ರಿಯಾ ಗ್ರಂಥಗಳಲ್ಲಿ ೧೫ ನೇ ಶತಮಾನದ ಪ್ರಕ್ರಿಯಾ ಕೌಮುದೀ ೧೭ನೇ ಶತಮಾನದ ಭಟ್ಟೋಜಿ ದೀಕ್ಷಿತನ ಸಿದ್ಧಾಂತ ಕೌಮುದೀ ಪ್ರಮುಖವಾದವು.

---

* ಲಿಂಗಾನುಶಾಸನಕ್ಕೆ ಬದಲು ಶಿಕ್ಷಾ ಶಾಸ್ತ್ರ ವನ್ನು ವ್ಯಾಕರಣದ ಅಂಗವೆಂದು ಪರಿಗಣಿಸಿದ್ದೂ ಉಂಟು.

ಪ್ರಾಯಶಃ ಪಾಣಿನೀಯ ವ್ಯಾಕರಣವನ್ನೇ ವಿಧಿವತ್ತಾದ ವ್ಯಾಕರಣವೆಂದು ಅಂಗೀಕರಿಸುವುದಕ್ಕೆ ಕೆಲವು ಕಾರಣಾಗಳಿವೆ.

೧. ಅದು ಪ್ರಕ್ರಿಯಾತ್ಮಕ ಒತ್ತು ಪಡೆದರೂ ಭದ್ರವಾದ ಭಾಷಾಶಾಸ್ತ್ರ ತತ್ವಗಳನ್ನು ಒಳಗೊಂಡಿದೆ. ಆ ತತ್ವಗಳನ್ನು ಪತಂಜಲಿ ಸ್ಪಷ್ಟಪಡಿಸಿದ.

೨. ವೇದಾಂಗವಾಗಿ ವೈದಿಕ ಭಾಷೆಗೆ ವ್ಯಾಕರಣ ಒದಗಿಸಿದಂತೆಯೇ ಲೌಕಿಕ ಸಂಸ್ಕೃತಕ್ಕೂ ಅಧ್ಯತೆ ನೀಡಿದ ಗ್ರಂಥವಿದು.

೩. ಎಲ್ಲಕ್ಕಿಂತ ಮಿಗಿಲಾಗಿ, ಸಂಕ್ಷಿಪ್ತವಾಗಿದ್ದರೂ ಸರ್ವತೋಮುಖವಾದ ಭಾಷಾ ಚಿಂತನೆಯನ್ನು ಇದು ಒಳಗೊಂಡಿರುವುದು. ಆದ್ದರಿಂದ ಚಾಲ್ತಿಯಲ್ಲಿಲ್ಲದ ಭಾಷಾ ರೂಪಗಳನ್ನೂ ನಿರ್ವಚಿಸುವ ಪ್ರಕ್ರಿಯೆ ಒಂದು ಇಲ್ಲಿದೆ. ಇದರಿಂದಾಗಿ ಪದರಚನೆಯಲ್ಲಿ, ಸಂಧಿನಿಯಮಗಳಲ್ಲಿ ಒಂದು ಸ್ವಯಂ ಚಾಲಕತೆ (Automotion) ಕಂಡು ಬಂದು ಈ ಕಾಲಕ್ಕೆ ಗಣಕಯಂತ್ರಗಳ ಉಪಯೋಗಕ್ಕೆ ಹತ್ತಿರವಾಗಿದೆ. ಈ ಕಾರಣ ಕ್ಕಾಗಿಯೇ ಪಾಣಿನಿಯು ನಿರ್ದಿಷ್ಟ ಭಾಷಾ ಘಟಕವನ್ನು ಲಕ್ಷ್ಯವಾಗಿ ಹೊಂದಿಲ್ಲ ಎಂಬ ಅಪವಾದವಿದೆ. ಅದು ಸರಿಯಲ್ಲ. ಪಾಣಿನೀಯ ನಿರ್ವಚನ ಕ್ರಮವೆಂದರೆ ಒಂದು ಅಧಿಕಾರಕ ನಿಯಮವನ್ನು ಆದರ್ಶ ಸ್ಥಿತಿಯಲ್ಲಿ ರೂಪಿಸಿಕೊಳ್ಳುತ್ತಾನೆ. ಅದಕ್ಕೆ ಚಾಲ್ತಿಯಲ್ಲಿರುವ ಅಪವಾದಗಳನ್ನು ಲೆಖ್ಖಕ್ಕೆ ತೆಗೆದುಕೊಳ್ಳುತ್ತಾನೆ. ಆದ್ದರಿಂದ ಪಾಣಿನಿಯ ಲಕ್ಷ್ಯ ಆದರ್ಶ ಪ್ರಕ್ರಿಯೆ ಮತ್ತು ಅದಕ್ಕಿರುವ ಅಪವಾದಗಳ ಪಟ್ಟಿ. ಆದ್ದರಿಂದ ಪಾಣಿನಿ ವ್ಯಾಕರಣ ಬರಿಯ ಪ್ರಯೋಗ ಬದ್ಧವಲ್ಲ, ಪ್ರಕ್ರಿಯಾ ಬದ್ಧವೂ ಕೂಡ. ಇದರಿಂದಾಗಿಯೇ ಈತನ ಪ್ರಕ್ರಿಯೆಯಲ್ಲಿ ಬರುವ 'ಲೃ'ಕಾರವಾಗಲಿ ಹಲವಾರು ಶಬ್ದರೂಪಗಳಾಗಲಿ ಪ್ರಯೋಗದಲ್ಲಿಲ್ಲದೆ ಇರಬಹುದು. ಇದು ಆತನ ಧಾತು ಪಾಠಕ್ಕೂ ಅನ್ವಯಿಸುವ ಮಾತು.

ಪಾಣಿನಿ ಅಷ್ಟಾಧ್ಯಾಯಿಯಲ್ಲಿ ಮೊದಲ ಏಳು ಅಧ್ಯಾಯ ಮತ್ತು ಎಂಟನೆಯ ಅಧ್ಯಾಯದ ಮೊದಲ ಪಾದ ಒಂದು ಘಟಕ–ಸಪಾದ ಸಪ್ತಾಧ್ಯಾಯಿ. ಎಂಟನೆಯ ಅಧ್ಯಾಯದ ಕೊನೆಯ ಮೂರು ಪಾದಗಳು ಒಂದು ಭಾಗ–ತ್ರಿಪಾದಿ. ಎರಡನೆಯ ಭಾಗದ ನಿಯಮ ಮೊದಲಭಾಗಕ್ಕೆ ಅನ್ವಯಿಸುವುದಿಲ್ಲ. ಪಾಣಿನಿಯ ಕಾಲಕ್ಕಾಗಲೇ ವೈದಿಕ ರೂಪಗಳಲ್ಲಿ ಮಾರ್ಪಾಟಾಗಿತ್ತು. ತನ್ನ ಕಾಲದ ಶಿಷ್ಟ ಭಾಷೆಗೆ ವಿಧಿ ನಿಷೇಧಾತ್ಮಕ ನಿಯಮಗಳನ್ನು ಪಾಣಿನಿ ರೂಪಿಸಿ ವೈದಿಕರೂಪಗಳಲ್ಲಿನ ಅಪವಾದವನ್ನು ತೋರಿಸಿದ (ಸ್ವರವೈದಿಕ ಪ್ರಕರಣ). ಶಿಕ್ಷಾಶಾಸ್ತ್ರದ ಮುಂದುವರಿಕೆಯಾಗಿ ವರ್ಣ ವಿಭಜನೆ, ಸಂಧಿ ನಿಯಮಗಳನ್ನು ಸೂತ್ರೀಕರಿಸುವಲ್ಲಿ ವರ್ಣಸಮಾಮ್ನಾಯವಾದ ಮಾಹೇಶ್ವರ ಸೂತ್ರಗಳು ಅದ್ಭುತವಾದ ಒಂದು ದರ್ಶನ. ಪಾಣಿನಿ ಧಾತುಪಾಠವನ್ನು ಬೇರೆಯಾಗಿ ತಯಾರಿಸಿದ್ದಾನೆ. ಧಾತುವಿಗೆ ಸೇರುವ ಆಖ್ಯಾತ–ಪ್ರತ್ಯಯಗಳು, ನಾಮ ಪದಕ್ಕೆ ಕಾರಣವಾದ ವಿಭಕ್ತಿ ಪ್ರತ್ಯಯಗಳನ್ನು ಎಲ್ಲರೂಪಗಳಿಗೆ ಅನ್ವಯವಾಗುವಂತೆ ಪಟ್ಟಿಮಾಡಿ ಧಾತು, ಪ್ರಾತಿಪದಿಕಗಳ ಜತೆ ಆಗುವ ಸಂಧಿನಿಯಮಗಳನ್ನೂ,

ಕ್ರಿಯಾಪದ ನಾಮಪದಗಳು ಭಿನ್ನರೂಪ ಪಡೆಯುವ ಭವ್ಯ ಆಕೃತಿಯನ್ನೂ ಕೊಟ್ಟಿದ್ದಾನೆ. ಇವಲ್ಲದೆ ಕೃತ್, ತದ್ಧಿತ ವೆಂಬ ಪದವೃತ್ತಿಗಳಿಗೂ ಪ್ರತ್ಯಯಗಳ ಮುಖಾಂತರ ನಿಯಮಗಳನ್ನು ಹೇಳಿದ್ದಾನೆ. ಸಮಾಸವೃತ್ತಿಯನ್ನು ಮಾತ್ರ ಅರ್ಥದ ಆಧಾರದ ಮೇಲೆ ವಿವರಿಸಿ, ಅಪವಾದಗಳನ್ನೂ ಸೂಚಿಸಿದ್ದಾನೆ.

## ಪಾಣಿನ್ಯೇತರ ವ್ಯಾಕರಣಗಳು

ಪಾಣಿನಿ ಪೂರ್ವ ಐಂದ್ರವ್ಯಾಕರಣ ಈಗ ಲುಪ್ತವಾಗಿದೆ. ಆದರೆ ತಂತ್ರ (ಅಥವಾ ಪ್ರಕ್ರಿಯಾ) ಪ್ರಧಾನವಾದ ಐಂದ್ರ ಸಂಪ್ರದಾಯದ ವ್ಯಾಕರಣ ಪಾಣಿನಿಯ ನಂತರದ ಹಲವು ವೈಯ್ಯಾಕರಣಿಗಳಿಗೆ ಭಿನ್ನಮಾರ್ಗ ತೋರಿಸಿರಬಹುದು. ತಂತ್ರ ಅಥವಾ ಪ್ರಕ್ರಿಯೆಯೇ ಪ್ರಧಾನವಾದ ಕಾತಂತ್ರ ವ್ಯಾಕರಣ (ಸು.ಕ್ರಿ.ಶ. ೧–೨ ಶತಮಾನ) ಅಂತಹದ್ದು. ಜೈನ ವ್ಯಾಕರಣವೆನ್ನಿಸಿಕೊಂಡ ಇದರಲ್ಲಿ ಲೌಕಿಕ ಸಂಸ್ಕೃತವನ್ನೇ ಲಕ್ಷ್ಯವಾಗಿಸಿಕೊಂಡು ಸಂಜ್ಞಾ,ಸಂಧಿ, ನಾಮ, ಕಾರಕ, ಸಮಾಸ, ತದ್ಧಿತ, ಆಖ್ಯಾತ, ಕೃತ್ ಎಂಬ ವಿಷಯಾನುಸಾರವಾಗಿ ೨೫ ಪಾದಗಳಲ್ಲಿ ವ್ಯಾಕರಣ ವಿವೇಚನೆ ಆಗಿದೆ. ಇದರ ಕರ್ತೃ ಶರ್ವವರ್ಮ ಎಂದು ಪ್ರತೀತಿ. ಪಾಣಿನಿಗೆ ಹೋಲಿಸಿದರೆ ಇದು ಸರಳವೂ ಸುಲಲಿತವೂ ಆದದ್ದು. ಇಲ್ಲಿನ ಪರಿಭಾಷೆ ಮುಂದೆ ಸರ್ವಮಾನ್ಯವಾಯಿತು. ಇದರ ಪ್ರಭಾವ ವ್ಯಾಪಕವಾಗಿ ದಕ್ಷಿಣಭಾರತದ ವ್ಯಾಕರಣಗಳ ಮೇಲಾಗಿದೆ. ಕೇಶಿರಾಜನಂತಹ ಕನ್ನಡ ವ್ಯಾಕರಣಕಾರರಿಗೆ ಅದು ಮಾದರಿ ಎನ್ನಲಾಗಿವೆ.

ಚಂದ್ರಗೋಮಿ ಎಂಬ ಪ್ರಾಯಃ ಬೌದ್ಧನೊಬ್ಬ ಲೌಕಿಕ ಸಂಸ್ಕೃತಕ್ಕಾಗಿಯೇ ಲಘು, ವಿಸ್ಪಷ್ಟ, ಸಂಪೂರ್ಣತೆಗಳನ್ನು ಗಮನದಲ್ಲಿರಿಸಿಕೊಂಡು ಚಾಂದ್ರವ್ಯಾಕರಣವನ್ನು ಬರೆದ. ಇದು ನೇಪಾಳ, ಟಿಬೆಟ್, ಸಿಲೋನಿನಂತಹ ಬೌದ್ಧ ಕೇಂದ್ರಗಳಲ್ಲಿ ಪ್ರಸಿದ್ಧಿಗೆ ಬಂದಿತು. ಚಂದ್ರಗೋಮಿಯು ಮಹಾಭಾಷ್ಯದ ಪುನರುಜ್ಜೀವಕ ಎಂದು ಭರ್ತೃಹರಿ ಹೊಗಳುತ್ತಾನೆ. ಇಷ್ಟಾಗಿ ಚಾಂದ್ರದಲ್ಲಿ ಪಾಣಿನಿಯ ಪದ್ಧತಿ ಕಾತಂತ್ರ ಪದ್ಧತಿಗಳ ಮಿಶ್ರಣವನ್ನು ಕಾಣಬಹುದು. ವೈದಿಕ ಮತದ ಪಾಣಿನಿಯ ಪದ್ಧತಿಯನ್ನೇ ಪರಿಷ್ಕರಿಸಿ ದಿಗಂಬರ ಜೈನ ತತ್ವಕ್ಕೆ ಅಳವಡಿಸಿಕೊಂಡವನು ಗಂಗ ದುರ್ವಿನೀತನ ಗುರು ದೇವನಂದಿ (ಕ್ರಿ.ಶ. ೫ನೇ ಶತಮಾನ). ಹೀಗೆಯೇ ಅಮೋಘವರ್ಷನ ಕಾಲದ ಪ್ರಾಯಃ ಶ್ವೇತಾಂಬರ ಪಂಥದ ಅಥವಾ ಯಾಪನೀಯ ಸಂಪ್ರದಾಯದ 'ಶಾಕಟಾಯನ'ನ 'ಶಬ್ದಾನುಶಾಸನ' ಅಷ್ಟಾಧ್ಯಾಯಿ ಪರಂಪರೆಗೆ ಹೊಸ ತಿರುವು ಕೊಟ್ಟ ವ್ಯಾಕರಣ.

## ಪ್ರಾಕೃತ ವ್ಯಾಕರಣಗಳು

ಸಂಸ್ಕೃತ ವ್ಯಾಕರಣದಲ್ಲಿ ಲೌಕಿಕ ಸಂಸ್ಕೃತಕ್ಕೇ ಪ್ರಾಶಸ್ತ್ಯ ದೊರೆತಂತೆ ಲೋಕ ಪ್ರಸಿದ್ಧವಾದ ಪ್ರಾಕೃತಗಳಿಗೂ ವ್ಯಾಕರಣರಚನೆಯಾಯಿತು. ತುಂಬಾ ಪ್ರಾಚೀನವೆಂದು ತೋರುವ 'ಪ್ರಾಕೃತ ಪ್ರಕಾಶ'ದ ಕರ್ತೃ ವರರುಚಿ ಪ್ರಾಯಶಃ ಪಾಣಿನಿಯ ಅಷ್ಟಾಧ್ಯಾಯಿಗೆ ಕಾರಿಕೆಗಳನ್ನು ಬರೆದವನಲ್ಲದಿರಬಹುದು. ಆದರೆ ಆ ಕೃತಿಯ

ಪರಂಪರೆಯಲ್ಲೇ ಮಹಾರಾಷ್ಟ್ರೀ ಪ್ರಾಕೃತವನ್ನು ಮುಖ್ಯವಾಗಿಯೂ ಪೈಶಾಚೀ, ಮಾಗಧೀ, ಶೌರಸೇನೀ ಪ್ರಾಕೃತಗಳನ್ನು ಅನುಬಂಧ ರೀತಿಯಲ್ಲೂ ವಿವರಿಸುತ್ತವೆ. ಸಂಸ್ಕೃತ ವ್ಯಾಕರಣಕ್ಕೆಂದು ಶಬ್ದಾನುಶಾಸನ ಬರೆದ ಜೈನ ವೈಯ್ಯಾಕರಣಿ ಹೇಮಚಂದ್ರ ಸೂರಿ (ಕ್ರಿ.ಶ. ೧೧—೧೨ನೇ ಶತಮಾನ) ಕೃತಿಯ ಕೊನೆಯಲ್ಲಿ ಶೌರಸೇನೀ, ಮಾಗಧೀ, ಪೈಶಾಚೀ, ಚೂಲಿಕಾಪೈಶಾಚೀ, ಅಪಭ್ರಂಶಗಳಷ್ಟರ ವ್ಯಾಕರಣಾಂಶಗಳನ್ನು ಸೇರಿಸುತ್ತಾನೆ. ಇಲ್ಲೆಲ್ಲಾ ಪ್ರಾಕೃತ ರೂಪಗಳು ಸಂಸ್ಕೃತದಿಂದ ಹೇಗೆ ಭಿನ್ನ ಎಂದು ತೋರಿಸುವುದೇ ಮುಖ್ಯ. ಆದ್ದರಿಂದ ಪ್ರಾಕೃತವು ಸಂಸ್ಕೃತ ಜನ್ಯ ಎಂಬ ಭಾವನೆ ಇದೆ. ಆದರೆ ಪತಂಜಲಿಯ ಮಹಾಭಾಷ್ಯದಲ್ಲಿದ್ದಂತೆ ಇವನ್ನು ಅಪಶಬ್ದಗಳೆಂದು ಅವಗಣಿಸುವ ಪ್ರವೃತ್ತಿ ಹಿಂಜರಿದಿದೆ. ಇದೇ ತೆರನಾಗಿ ಬೋಧಿಸತ್ತ, ಕಚ್ಚಾಯನ, ಸಬ್ಬಗುಣಾಕರ, ಮೊಗ್ಗಲ್ಲಾನ, ಸದ್ದನೀತಿಗಳ ಪಾಲಿ ವ್ಯಾಕರಣಗಳ ಪರಂಪರೆಯೂ ಇದೆ.

## ವ್ಯಾಕರಣ ತತ್ವಶಾಸ್ತ್ರ

ಪ್ರಕ್ರಿಯಾತ್ಮಕ ಸವಿಭಕ್ತ ವ್ಯಾಕರಣಕ್ಕೆ ಪ್ರತಿಯಾಗಿ ತಾತ್ವಿಕವಾದ ಅವಿಭಕ್ತ ವ್ಯಾಕರಣ ಪರಂಪರೆ ಇತ್ತೆಂದು ಹೇಳಿದೆ. ಪಾಣಿನಿ ಹೇಳುವ ಪ್ರಕ್ರಿಯೆಯ ಹಿನ್ನೆಲೆಯಲ್ಲಿ ಒಂದು ದರ್ಶನವಿದ್ದರೂ ಅದು ಸುವ್ಯಕ್ತವಲ್ಲ ಸುಮಾರು ಪಾಣಿನಿಯ ಕಾಲದಲ್ಲೇ 'ವ್ಯಾಡಿ' ಎನ್ನುವವನು ತನ್ನ 'ಸಂಗ್ರಹ' ಎಂಬ ಗ್ರಂಥದಲ್ಲಿ ಒಂದು ಲಕ್ಷಶ್ಲೋಕಗಳಲ್ಲಿ ವ್ಯಾಕರಣ ತತ್ವಗಳನ್ನು ಸಂಗ್ರಹಿಸಿದ್ದನಂತೆ. ಆದರೆ ಅದು ಕಾಲಕ್ರಮದಲ್ಲಿ ಲುಪ್ತವಾಗಿ ಹೋಯಿತು. ಪತಂಜಲಿಯು ಸಹ 'ಸಂಗ್ರಹ'ದ ಉಲ್ಲೇಖ ಮಾಡಿದ್ದಾನೆ. ಅಲ್ಲಿನ ನ್ಯಾಯ ಬೀಜಗಳನ್ನು ಮಹಾಭಾಷ್ಯದಲ್ಲಿ ಅಳವಡಿಸಿದ್ದಾನೆ. ಕಾಲಕ್ರಮದಲ್ಲಿ ಕಳೆದು ಹೋದ ಈ ವ್ಯಾಕರಣ ದರ್ಶನವು ದಕ್ಷಿಣ ಪರ್ವತದಲ್ಲಿ ಒಂದು ಪುಸ್ತಕವಾಗಿ ಮಾತ್ರ ಉಳಿದಿತ್ತೆಂದೂ ಅದನ್ನು ಚಂದ್ರಾಚಾರ್ಯರೇ ಮೊದಲಾದವರು ನ್ಯಾಯವನ್ನು ಅನುಸರಿಸಿ ವಿಸ್ತರಿಸಿದರೆಂದೂ ಅದರ ಮುಂದುವರಿಕೆಯೇ 'ವಾಕ್ಯಪದೀಯ'ವೆಂದೂ ಭರ್ತೃಹರಿ ಹೇಳಿಕೊಂಡಿದ್ದಾನೆ.

ಪ್ರಾಯಶಃ ಸುಮಾರು ಕ್ರಿ.ಶ. ಐದನೇ ಶತಮಾನದಲ್ಲಿದ್ದ ಭರ್ತೃಹರಿಯ ವಾಕ್ಯಪದೀಯವೇ ಪಾಣಿನೀಯ ಸಂಪ್ರದಾಯದಲ್ಲಿನ ವ್ಯಾಕರಣತತ್ವಕ್ಕೆ ಬೋಧಕ ಗ್ರಂಥ. ಇದರ ವಿಚಾರಗಳನ್ನು ಆತನ ಗುರು ವಸುರಾತ ಸಂಗ್ರಹಿಸಿದ್ದನೆಂದೂ ಹೇಳಿಕೊಂಡಿದ್ದಾನೆ. ಮುಂದೆ ಜಿನೇಂದ್ರಬುದ್ಧಿ, ಕೈಯ್ಯಟ ಮುಂತಾದ ವೈಯ್ಯಾಕರಣಿಗಳೂ, ಬೌದ್ಧ ತಾರ್ಕಿಕ ದಿಙ್ನಾಗನೂ ಈತನ ವಾದಗಳನ್ನು ಅನುವಾದಿಸಿಕೊಂಡಿದ್ದಾರೆ. ವಾಕ್ಯಪದೀಯಕ್ಕೆ ಅನೇಕ ಟೀಕೆಗಳಿದ್ದುವೆಂದೂ ತಿಳಿದುಬರುತ್ತದೆ. ಭರ್ತೃಹರಿಗೇ 'ಹರಿ' ಎಂಬ ಹೆಸರೂ ಇದ್ದು ಆತನೇ ಮೊದಲ ಎರಡು ಕಾಂಡಗಳಿಗೆ ವೃತ್ತಿಯನ್ನೂ ಬರೆದಿದ್ದಾನೆ ಎಂದು ಚಾರುದೇವ ಶಾಸ್ತ್ರಿಗಳು ವಾದಿಸುತ್ತಾರೆ. ಮೂಲ ವಾಕ್ಯಪದೀಯ ಮೂರು ಕಾಂಡಗಳಲ್ಲಿದೆ. ಅದರಲ್ಲಿ ಒಟ್ಟು ಸುಮಾರು ಎರಡು ಸಾವಿರ ಕಾರಿಕೆ (ಶ್ಲೋಕ) ಗಳು ಇವೆ. ಮೊದಲನೆಯ ಬ್ರಹ್ಮಕಾಂಡದಲ್ಲಿ ಶಬ್ದತತ್ವ ಅಥವಾ ವಾಕ್ ತತ್ವದ

ವಿವೇಚನೆ, ಶಬ್ದ ಬ್ರಹ್ಮದ ಕಲ್ಪನೆ ಇದೆ. ಇಲ್ಲಿಯೇ ಸ್ಫೋಟವಾದದ ಮಂಡನೆ ಇದೆ (ಇದನ್ನು ವಾಕ್‌ತತ್ವ ವಿವೇಚನೆಯಲ್ಲಿ ಮುಂದೆ ತಿಳಿಸಲಾಗುತ್ತದೆ) ಸ್ಫೋಟವು ಪ್ರಧಾನತಃ ವಾಕ್ಯಸ್ಫೋಟವೇ. ಎರಡನೇ ಕಾಂಡ ವಾಕ್ಯ ವಿಚಾರವಾದ ವಾಕ್ಯಕಾಂಡ ಎನಿಸಿಕೊಂಡಿದೆ. ಇದರಲ್ಲಿ ವಾಕ್ಯದ ಲಕ್ಷಣವನ್ನು ವಿಮರ್ಶಿಸಿ ವಾಕ್ಯದಿಂದಲೇ ಅರ್ಥ ಪ್ರತೀತಿಯೆಂದೂ ಅದಕ್ಕೆ ಕ್ರಿಯೆಯೇ ಪ್ರಧಾನವೆಂದೂ ವಾಕ್ಯಾರ್ಥವು ಬುದ್ಧಿಗೋಚರ ವೆಂದೂ ಅದಕ್ಕೆ ಪೂರಕವಾಗಿ ಪದ–ವಾಕ್ಯ ಸಂಬಂಧದ ವಿಸ್ತಾರವಾದ ಚಾರ್ಚೆ ಮಾಡಿದ್ದಾನೆ. ಮೂರನೇ ಕಾಂಡ ಪದಕಾಂಡ. ಅದರಲ್ಲಿ ಬಾಧಾಸಮುದ್ದೇಶ, ಲಕ್ಷಣ ಸಮುದ್ದೇಶವೆಂಬ ಭಾಗಗಳು ಈಗ ಲುಪ್ತವಾಗಿವೆ. ಉಳಿದಂತೆ ಜಾತಿ, ದ್ರವ್ಯ, ಸಂಬಂಧ, ಸಾಧನ (ಕಾರಕ), ಗುಣ, ಕ್ರಿಯಾ, ಕಾಲ, ಸಂಖ್ಯಾ, ಲಿಂಗ, ಪುರುಷ, ಉಪಗ್ರಹ (ಆಖ್ಯಾತ ಪ್ರತ್ಯಯ) ಮತ್ತು ವೃತ್ತಿ (ಕೃತ್, ತದ್ಧಿತ, ಸಮಾಸ)ಗಳಿಗೆ ಸಂಬಂಧಿಸಿದಂತೆ ಹನ್ನೆರಡು ಸಮುದ್ದೇಶಗಳಿವೆ. ಭತೃಹರಿಯ ನಂತರ ನಾಗೇಶಭಟ್ಟ ಮುಂತಾದ ವಿದ್ವಾಂಸರು ಇಲ್ಲಿನ ಸ್ಫೋಟವಾದ ಮುಂತಾದ ವಿಷಯಗಳನ್ನೇ ಕುರಿತು ಪ್ರಕರಣ ಗ್ರಂಥಗಳನ್ನು ರಚಿಸಿದ್ದಾರೆ.

### ನಿಘಂಟು–ನಿರುಕ್ತ–ಕೋಶಗಳು

ಶಬ್ದದ ಸ್ವರೂಪವಲ್ಲದೆ ಶಬ್ದದ ಅರ್ಥನಿರ್ಣಯವೂ ಬ್ರಾಹ್ಮಣಗಳ ಕಾಲದಿಂದ ಬಂದಿದ್ದು, ವೇದಾಂಗವಾದ ನಿರುಕ್ತಕ್ಕೆ ಎಡೆಯಾಯಿತು. ಇದು ಪ್ರಾಯಶಃ ಕ್ರಿ.ಪೂ. ೬ನೇ ಶತಮಾನಕ್ಕೂ ಹಿಂದಿನದೆಂದು ಪರಿಗಣಿಸಲಾಗಿದೆ. ನಿರುಕ್ತದ ಮೂಲ, ನಿಘಂಟು–ಒಂದು ಪದಕೋಶ. ಒಂದನೇ ಅಧ್ಯಾಯದಲ್ಲಿ ಪದಾರ್ಥಗಳ ಹೆಸರುಗಳು, ನಾನಾರ್ಥ ಪದಗಳೂ, ಎರಡನೇ ಅಧ್ಯಾಯದಲ್ಲಿ ಪ್ರಾಣಿಗಳೂ ಅವುಗಳ ಅಂಗಗಳೂ, ಮೂರನೇ ಅಧ್ಯಾಯದಲ್ಲಿ ಹಿಂದೆ ಹೇಳಿದ್ದರ ಗುಣಗಳೂ ಪಟ್ಟಿಯಾಗಿವೆ. ಈ ಮೂರಧ್ಯಾಯ ನೈಘಂಟುಕ ಕಾಂಡ, ನಾಲ್ಕನೆ ಅಧ್ಯಾಯದಲ್ಲಿ ಲೌಕಿಕದಲ್ಲಿಲ್ಲದೆ ವೇದದಲ್ಲಿ ಮಾತ್ರ ಇರುವ ಪದಗಳ ಪಟ್ಟಿಯಿದೆ. ಅದು ನೈಗಮ ಕಾಂಡ, ಐದನೇಯ ಅಧ್ಯಾಯ ದೇವತೆಗಳ ಹೆಸರಿನ ಪಟ್ಟಿ. ಅದಕ್ಕೆ ದೈವತ ಕಾಂಡವೆಂದು ಹೆಸರು. ಮೂಲತಃ ವೇದವನ್ನು ಅನುಲಕ್ಷಿಸಿ, ಲೋಕ ಬಳಕೆಯಲ್ಲಿಯೂ ಸಮಾನವಾಗಿರುವ ಪದಗಳ ಪಟ್ಟಿ ಮಾಡುವ ಈ ಕ್ರಮವೇ ಮುಂದೆ ಕಾವ್ಯ ಶಾಸ್ತ್ರ ಗಳನ್ನು ಅನುಲಕ್ಷಿಸಿ ಪದಗಳನ್ನು ಪಟ್ಟಿಮಾಡುವ 'ಕೋಶ'ಗಳಿಗೆ ಕಾರಣವಾಗಿರಬೇಕು.

ನಿಘಂಟಿನ ಪಟ್ಟಿಯಲ್ಲಿರುವ ಪದಗಳ ಉತ್ಪತ್ತಿ ವಿವರಣೆ ಮತ್ತು ಮಂತ್ರಗಳ ಸಾಂದರ್ಭಿಕ ಅರ್ಥದ ವಿಸ್ತಾರವಾದ ಚರ್ಚೆ ನಿರುಕ್ತದಲ್ಲಿದೆ. ಇದರಲ್ಲಿ ಹನ್ನೆರಡು ಅಧ್ಯಾಯಗಳೂ ಎರಡು ಪರಿಶಿಷ್ಟ ಅಧ್ಯಾಯಗಳೂ ಇವೆ. ನಿಘಂಟು–ನಿರುಕ್ತ ಬರೆದದ್ದು ಒಬ್ಬರೇ ಯಾಸ್ಕರೆ ? ಎಂಬ ಬಗ್ಗೆ ಚರ್ಚೆ ಇದೆ. ಅದೇನೇ ಇರಲಿ, ನಿರುಕ್ತದಲ್ಲಿ ಮೊದಲ ಬಾರಿಗೆ ಪದಗಳನ್ನು ನಾಮ, ಕ್ರಿಯಾ, ನಿಪಾತ, ಉಪಸರ್ಗವೆಂದು ವಿಭಜಿಸಿ ಪದಗಳಿಗೆ ಸ್ವತಂತ್ರವಾದ ಅರ್ಥವಿರುವ ಕಡೆ ಗಮನ ಸೆಳೆದಿದೆ. ಇದಲ್ಲದೆ ಪದ ಉತ್ಪತ್ತಿಯ ಬಗ್ಗೆ

ತನಗಿಂತ ಹಿಂದಿನ ಚರ್ಚೆಯನ್ನು ಮಂಡಿಸಿ ನಾವು ಪದಾದಿಗಳ ಲಕ್ಷಣವನ್ನು ತಿಳಿಸಿ ಎಲ್ಲಾ ಪದಗಳೂ ಧಾತು ಮೂಲವಾದವೆಂಬ ಸಿದ್ಧಾಂತವನ್ನು ಎತ್ತಿ ಹಿಡಿಯಲಾಗಿದೆ. ಇದಕ್ಕನುಸಾರವಾಗ ಎಲ್ಲ ಪದಗಳನ್ನೂ ಧಾತ್ವರ್ಥದಿಂದ ವಿವೇಚಿಸಿ ಆ ಯೌಗಿಕಾರ್ಥವೇ (ಅಬಿಧಾ ಅಥವಾ ವಾಚ್ಯ ಎಂದು ಮುಂದೆ ಕರೆಯುವ) ಅರ್ಥ ಎಂಬ ಭಾವನೆ ಇದ್ದರೂ ಪ್ರಯೋಗಗಳಲ್ಲಿ ಅದಕ್ಕೆ ಸಂಜ್ಞಾರ್ಥ ಅಥವ ರೂಢಿಯ, ಸಂಕೇತದ ಅರ್ಥ ಏನೆಂದೂ ನಿರುಕ್ತಕಾರ ತಿಳಿಸುತ್ತಾನೆ. ಹೀಗೆ ನಿರುಕ್ತವು ಪ್ರಪಂಚದ ಮೊದಲ ನಿರುಕ್ತಿಕೋಶ.

ವೇದಾರ್ಥ ಪ್ರತಿಪಾದನೆಗೆ ಆಯಾ ಪದಗಳ ಪ್ರಯೋಗ ಇರುವ ಮಂತ್ರಗಳನ್ನೂ ವಿಶ್ಲೇಷಿಸುವ ವಿಧಾನವನ್ನು ಯಾಸ್ಕರು ಅನುಸರಿಸಿದ್ದಾರೆ. ಹೀಗೆ ಕೋಶವು ಪ್ರಯೋಗದ ಆಧಾರ ಹೊಂದಿರಬೇಕೆನ್ನುವುದನ್ನೂ ಕಾಣುತ್ತೇವೆ. ಯಾಸ್ಕರ ಈ ಕೃತಿ ವೈಯ್ಯಾಕರಣಿಗಳಿಗೂ ಬೋಧ್ಯ. ಪಾಣಿನಿಯೂ ಯಾಸ್ಕಾದಿಭ್ಯೋ ಗೋತ್ರೇ (ಪಾ II, ೪–೬೩) ಎಂದು ಅವರನ್ನು ಉಲ್ಲೇಖಿಸಿದ್ದಾನೆ. ಈತನ 'ಧಾತುಮೂಲವಾದ' ವೈಯ್ಯಾಕರಣಿಗಳ ಮೇಲೆ ಬಹಳ ಪ್ರಭಾವ ಬೀರಿದೆ ಮತ್ತು ಧಾತು ಪಾಠವನ್ನು ಸೂತ್ರ ಪಾಠಕ್ಕೆ ಮೂಲವೆನ್ನುವಂತೆ ಮಾಡಿದೆ. (ಕೇಶಿರಾಜನೂ ಧಾತುಗಳ ಪಟ್ಟಿ ಕೊಡುವುದನ್ನು ಸ್ಮರಿಸಬಹುದು) ಸಾಯಣರ ಮಾಧವೀಯ ಧಾತು ವೃತ್ತಿಯವರೆಗೂ ನಿರುಕ್ತಕಾರನ ಮತ್ತು ಅವನ ವ್ಯಾಖ್ಯಾನಕಾರರ ಮಾತುಗಳು ಪ್ರಮಾಣವಾಗಿವೆ. ನಿರುಕ್ತದ ಮೇಲೆ ಅನೇಕ ವ್ಯಾಖ್ಯಾನಗಳು ಇದ್ದು ಅನೇಕವು ಲುಪ್ತವಾಗಿ ಹೋಗಿವೆ. ಕೆಲವು ಉಳಿದಿವೆ.

ಮಹಾಭಾಷ್ಯದಲ್ಲಿ, ವ್ಯಾಕರಣವೇಕೆ ? ಸಾಧು ಪ್ರಯೋಗಕ್ಕೆ ತಾನೆ ? ಹಾಗಿದ್ದರೆ ಸಾಧು ಶಬ್ದಗಳ ಪಟ್ಟಿ ಕೊಟ್ಟರೆ ಸಾಕಲ್ಲ ಎಂಬ ವಾದ ಬರುತ್ತದೆ. ಅನಂತೋ ವೈ ಶಬ್ದಾಃ, ಶಬ್ದಗಳು ಎಣಿಕೆಯಿಲ್ಲದಷ್ಟು ಎಂದೂ ಏಕೆಂದರೆ ಎಷ್ಟೆಲ್ಲಾ ಲೋಕಗಳು, ಎಷ್ಟೆಲ್ಲ ಪದಾರ್ಥಗಳು, ಏನೆಲ್ಲ ಶಾಸ್ತ್ರಗಳು ಅವೆಲ್ಲದಕ್ಕೆ ಎಷ್ಟು ಪದಗಳಾದರೆ ಸಾಕು? ಎಂದು ಸಮಾಧಾನ ಹೇಳಿದೆ. ಇಷ್ಟಾಗಿ ವೇದಾಂಗವಾದ ನಿಘಂಟು ನಾಮಪದ ಕ್ರಿಯಾಪದಗಳನ್ನು (ಎಲ್ಲವನ್ನೂ ಅಲ್ಲದಿದ್ದರೂ ಮುಖ್ಯವಾದದ್ದನ್ನು) ಪಟ್ಟಿ ಮಾಡಿತ್ತು, ನಿರುಕ್ತದ ನಂತರ ಧಾತುಪಾಠ ಆವಶ್ಯಕವೆನಿಸಿತ್ತು, ಮುಂದೆ ಮಹಾಕಾವ್ಯಗಳ ಕಾಲಕ್ಕೆ ಆಯಾ ಶಾಸ್ತ್ರಗಳಿಗೆ ಸೀಮಿತವಾದ ಪದಗಳ ಪಟ್ಟಿ (ಕೋಶ) ಹಾಗೂ ಕಾವ್ಯಕ್ಕೆ ಬೇಕಾದಾಗ ಅದನ್ನು ತಂದುಕೊಳ್ಳುವುದಕ್ಕೆ ಅಂತ, ಲಿಂಗಗಳ ನಿದರ್ಶನವಿರುವ ಕೋಶ ಅವಶ್ಯವೆಂದು ತೋರಿತು. ಹಾಗಾಗಿ ಎಲ್ಲ ಶಾಸ್ತ್ರಜ್ಞರೂ ಕೋಶಜ್ಞರಾಗಬೇಕೆಂದು ವಿದ್ಯೆಗಳ ಒಂದು ಭಾಗ ಕೋಶವಾಯಿತು. ಈ ಪರಂಪರೆಯಲ್ಲಿ ಬೌದ್ಧನಾದ ಅಮರಸಿಂಹನ ನಾಮಲಿಂಗಾನು ಶಾಸನವೆಂಬ 'ಅಮರ ಕೋಶ' ಅತ್ಯಂತ ಪ್ರಸಿದ್ಧವಾದದ್ದು. ಅದಲ್ಲದೆ 'ವೈಜಯಂತಿ', 'ವಿಶ್ವ', 'ಅಭಿಧಾನ ರತ್ನಮಾಲಾ ಎಂಬ ಹಲಾಯುಧಕೋಶ' ಮುಂತಾದವು ತಮ್ಮ ಕಾಲದ ಅವಶ್ಯಕತೆಗೆ ತಕ್ಕಂತೆ ಬಂದಿವೆ. ಇವೆಲ್ಲವೂ ಕಂಠಪಾಠಕ್ಕೆ ಅನುಕೂಲವಾದ ಚಿಕ್ಕ ಪದ್ಯಗಳ ರೂಪಗಳಲ್ಲೇ ಇವೆ.

## ಮೀಮಾಂಸ

ವ್ಯಾಕರಣ ನಿರುಕ್ತಗಳ ವಿಶ್ಲೇಷಣಾತ್ಮಕ ಪದಕೇಂದ್ರಿತ ಭಾಷಾ ಚಿಂತನೆಗೆ ಪ್ರತಿಯಾಗಿ ಸಂಶ್ಲೇಷಣಾತ್ಮಕವಾದ ವಾಕ್ಯಕ್ಕೆ ಒತ್ತು ಕೊಟ್ಟ ಭಾಷಾ ಚಿಂತನೆ ಮೀಮಾಂಸಾ ಶಾಸ್ತ್ರದಲ್ಲಿ ಕಾಣುತ್ತದೆ. ಅರ್ಥವು ಪದದಿಂದ ಹೊರಟರೂ ಪೂರ್ಣವಾಗುವುದು ವಾಕ್ಯದಲ್ಲಿ. ಶಬ್ದವನ್ನು ಅಳೆದು ನೋಡಿ, ಅರ್ಥವನ್ನು ಖಚಿತಗೊಳಿಸಿಕೊಳ್ಳುವುದೇ ಮೀಮಾಂಸ. ವೇದದಲ್ಲಿನ ಮಂತ್ರ ಬ್ರಾಹ್ಮಣಗಳ ಅರ್ಥವನ್ನು ಧರ್ಮ (ಅಥವಾ ಕರ್ಮ)ಕ್ಕೆ ಹೊಂದಿಸಿ, ಅಲ್ಲಿ ಇರಬಹುದಾದ ವೈರುಧ್ಯವೇ ಮುಂತಾದ ತೊಡಕುಗಳನ್ನು ನಿವಾರಿಸಿ ಸ್ಪಷ್ಟ, ಸುಸಂಗತ ಅರ್ಥ ಹುಡುಕಲು ಹೊರಟ ವೇದದ ಉಪಾಂಗ ಪೂರ್ವ ಮೀಮಾಂಸಾ–ಕರ್ಮ ಮೀಮಾಂಸಾ, ಧರ್ಮ ಮೀಮಾಂಸಾ ಎಂಬ ಹೆಸರುಗಳನ್ನು ಪಡೆದಿದೆ. 'ಮೀಮಾಂಸಾ' ಪದಕ್ಕೆ ಅರ್ಥಗ್ರಹಣ ಪದ್ಧತಿ ಎಂಬ ಕಲ್ಪನೆಯೂ ತೋರಿ ಬರುತ್ತದೆ.

ಶ್ರುತಿ ಎಂದರೆ ವೇದ. ಅದರ ಅರ್ಥ ಅದರ ಶಬ್ದಗಳ ಮೂಲಕವೇ ತಿಳಿಯಬೇಕು. ಆದರೆ ಬಿಡಿ ಶಬ್ದಗಳು ವೇದ–ಲೋಕಗಳಿಗೆ ಸಮಾನ. ಇದಕ್ಕೆ ಪ್ರತಿಯಾಗಿ ಒಂದು ವಾಕ್ಯ ಮತ್ತು ಅದರ ಆನುಪೂರ್ವಿಯೇ ವೇದ ಸಾಹಿತ್ಯದ ವಿಶೇಷ. ಶಬ್ದದ ಅರ್ಥ ವಾಕ್ಯಕ್ಕೆ ಅಧೀನ. ವಾಕ್ಯ ಮತ್ತು ವಾಕ್ಯ ಸರಣಿಯಿಂದ ಬರುವ ಪ್ರಕರಣ, ಪ್ರಕರಣಗಳ ಸುಸಂಬದ್ಧತೆಯಿಂದ ಬರುವ ಒಟ್ಟು ತಾತ್ಪರ್ಯ ಉಂಟಾಗಿ, ಆ ತಾತ್ಪರ್ಯದ ಸಂಗತತೆಯೇ 'ಏಕವಾಕ್ಯತೆ' ಎಂದು ಮೀಮಾಂಸೆ ಭಾವಿಸುವುದರಿಂದ ಈ ಶಾಸ್ತ್ರಕ್ಕೆ 'ವಾಕ್ಯಶಾಸ್ತ್ರ' ಎಂದು ಹೆಸರು.

ಪತಂಜಲಿಗಳಿಗಿಂತ ಹಿಂದೆ (ಸು. ಕ್ರಿ.ಪೂ. ೨ನೇ ಶತಮಾನದಲ್ಲಿ) ಇದ್ದ ಜೈಮಿನಿಯ ಮೀಮಾಂಸಾ ಸೂತ್ರಗಳೇ ಈ ಶಾಸ್ತ್ರದ ಆದ್ಯ ಗ್ರಂಥ. ಅರವತ್ತು ಉಪ ವಿಭಾಗಗಳಲ್ಲಿ ಎರಡೂವರೆ ಸಾವಿರಕ್ಕೂ ಹೆಚ್ಚು ಸೂತ್ರಗಳನ್ನು ಹನ್ನೆರಡು ಅಧ್ಯಾಯಗಳಲ್ಲಿ ವಿಂಗಡಿಸಿದೆ. ಇದನ್ನು ದ್ವಾದಶಲಕ್ಷಿಣೀ ಎಂದು ಕರೆಯುತ್ತಾರೆ. ಸು.ಕ್ರಿ.ಶ. ೪ನೇ ಶತಮಾನದ ಶಬರಸ್ವಾಮಿಗಳ ಭಾಷ್ಯವೇ ನಂತರದ ಕೃತಿ ಇದರಲ್ಲಿ ಉಪವರ್ಷರ ವೃತ್ತಿಯ ಉಲ್ಲೇಖವಿದ್ದರೂ ಅದು ಲಭ್ಯವಾಗಿಲ್ಲ. ಶಾಬರ ಭಾಷ್ಯದ ಮೇಲೆ ೭–೮ ನೇ ಶತಮಾನದ ಕುಮಾರಿಲಭಟ್ಟ, ಪ್ರಭಾಕರರು ಭಿನ್ನರೀತಿಯ ವ್ಯಾಖ್ಯಾನ ಮಾಡಿದ್ದಾರೆ. ಮುಂದೆ ಈ ಇಬ್ಬರ ಪರಂಪರೆ ಬೆಳೆದಿದೆಯಾದರೂ ಭಾಟ್ಟಮತ ಹೆಚ್ಚು ಮನ್ನಣೆ ಪಡೆದಿದೆ.

ಮೀಮಾಂಸಾ ಶಾಸ್ತ್ರದ ಅರ್ಥಗ್ರಹಣದಲ್ಲಿನ ಯುಕ್ತತೆಯನ್ನು ತೋರಿಸುವ ಯುಕ್ತಿಗಳಿಗೆ 'ನ್ಯಾಯ'ವೆಂದು ಹೆಸರು. ಈ ನ್ಯಾಯಗಳು ವಾಕ್ಯಗಳನ್ನು ವಿಸಂಗತವಲ್ಲದಂತೆ ಜೋಡಿಸಿಕೊಳ್ಳಲು ಬಳಸಲ್ಪಡುತ್ತವೆ. ಪಾಠ್ಯವನ್ನು ಆಧರಿಸಿದ ಎಲ್ಲ ಶಾಸ್ತ್ರ ವಿವೇಚನೆ ಅರ್ಥನಿಷ್ಕರ್ಷೆಗಳಲ್ಲಿ ಇದನ್ನು ಬಳಸಲಾಗಿದೆ. ಧರ್ಮಶಾಸ್ತ್ರವನ್ನು ಆಧರಿಸಿದ ನಮ್ಮ ದೇಶದ ನ್ಯಾಯಾಂಗ ವ್ಯಾಖ್ಯಾನದಲ್ಲೂ ಇದು ವಿಶೇಷವಾಗಿ ಕಾಣುತ್ತದೆ.

ವಾಕ್ಯಗಳು ಎರಡು ವಿಧ. ಒಂದು ಕ್ರಿಯಾಪದದಲ್ಲಿ ಆಕಾಂಕ್ಷೆ ಪೂರ್ಣಗೊಳ್ಳುವ ವಾಕ್ಯ. ಇದು ಕ್ರಿಯೆಯನ್ನೇ ಬೋಧಿಸುತ್ತದೆ. (ವೇದಪೂರ್ವ ಭಾಗದಲ್ಲಿ) ಆದ್ದರಿಂದ ಮೀಮಾಂಸಾ ಶಾಸ್ತ್ರದಲ್ಲಿ ಇದಕ್ಕೆ ಪ್ರಾಧಾನ್ಯತೆ. ಇನ್ನೊಂದು ರೀತಿಯ ವಾಕ್ಯ ತಾದಾತ್ಮ್ಯ ಬೋಧಕ ಇಲ್ಲಿ ಜ್ಞಾನ ಅಥವಾ ಅಭಿಜ್ಞಾನವೇ ಮುಖ್ಯ. ಉತ್ತರ ಮೀಮಾಂಸ ಎನಿಸಿ ಕೊಂಡ ವೇದಾಂತದಲ್ಲಿ ಇದೇ ಮುಖ್ಯ. ಪೂರ್ವ ಮೀಮಾಂಸಕರು ಈ ಎರಡನೆ ರೀತಿಯ ವಾಕ್ಯಗಳು ಮೊದ್ಲ ರೀತಿಯ ವಾಕ್ಯಗಳಿಗೆ ಅಧೀನ ಎನ್ನುತ್ತಾರೆ.

## ಭಾವನಾ

ಧರ್ಮವು ಚೋದನಾ ಲಕ್ಷಣ (ಜೈಮಿನಿ ಸೂತ್ರ ೧–೧–೨) ಎಂದೂ ಕ್ರಿಯೆಯನ್ನು ಹೇಳುವ ವಾಕ್ಯವೇ ಆ ಚೋದನೆ ಎಂದೂ ಹೇಳಿದೆ. ಈ ಚೋದನೆಯಿಂದ ಕೇಳುಗರಲ್ಲಿ ಕೆಲಸ ಮಾಡಬೇಕೆನ್ನುವ ಮನೋವ್ಯಾಪಾರ ಉಂಟಾಗುವುದು. ಈ ಮನೋವ್ಯಾಪರ ವನ್ನೇ 'ಭಾವನಾ' ಎಂದೂ ಕರೆದಿದ್ದಾರೆ. ಕ್ರಿಯಾಪದದ ಲಿಙ್‌ತ್ವವು (Stimulus) ಶಾಬ್ದಿಭಾವನೆ ಅದರ ಆಖ್ಯಾತತ್ವವು (Response) ಪ್ರಯತ್ನ ರೂಪವಾದ ಆರ್ಥಿ ಭಾವನೆ. ಆದರೆ ವೇದದಲ್ಲಿ 'ಹೇಳುವ ವ್ಯಕ್ತಿ' ಇಲ್ಲದ್ದರಿಂದ ಅಲ್ಲಿ ಶಾಬ್ದಿಭಾವನೆ ವ್ಯಕ್ತಿನಿರಪೇಕ್ಷವಾಗಬಹುದು. ಆದರೆ ಆರ್ಥಿಭಾವನೆ ಕೇಳುವ ವ್ಯಕ್ತಿಯನ್ನ ಪೇಕ್ಷಿಸಲೇಬೇಕಾಗುವ ಕಡೆ ಗಮನಸೆಳೆದು ಶಬ್ದಾರ್ಥ ಸಂಬಂಧದ ಬಗ್ಗೆ ಹೊಸ ಆಲೋಚನೆಗಳನ್ನು ಹುಟ್ಟಿಸುತ್ತದೆ.

## ಅನ್ವಯ

ಶಬ್ದಗಳು ಒಂದೊಂದಕ್ಕೂ ಒಂದೊಂದು ಅರ್ಥವಿದೆ. ವಾಕ್ಯವು ಶಬ್ದಗಳ ಸಮೂಹ. ಒಂದು ಪದದೊಳಗಿನ ಶಬ್ದ ಮತ್ತು ಪ್ರತ್ಯಯಗಳ ಅರ್ಥ ಪರಂಪರಾನು ಗತವಾಗಿ ಬರುತ್ತದೆ. ಪದಗಳ ಅರ್ಥವೇ ವಾಕ್ಯದ ಅರ್ಥ ಎಂದು ಶಾಬರಭಾಷ್ಯ (೧–೧–೭) ಹೇಳಿದರೂ ಪದಗಳ ಅರ್ಥ ವಾಕ್ಯದ ಅರ್ಥ ಕೊಡುವುದೇ ವಾಕ್ಯದ ಅರ್ಥ ಪದಗಳ ಅರ್ಥವನ್ನು ಪುನರ್ನಿರ್ಧರಿಸುವುದೇ ? ಎಂಬ ಜಿಜ್ಞಾಸೆ ಇದೆ. ಒಂದು ವಾಕ್ಯವು ಯಾವಾಗಲೂ ಕ್ರಿಯಾಪದವನ್ನು ಕೊನೆಯಲ್ಲಿ ಹೊಂದಬೇಕೆಂದಿಲ್ಲ ಆದರೂ ಕ್ರಿಯಾ ಪದಕ್ಕೆ ಉಳಿದ ಪದಗಳನ್ನು ಅನ್ವಯಿಸಿಕೊಳ್ಳಬೇಕಾಗುತ್ತದೆ. ಹಾಗಾದರೆ ಆ ಅನ್ವಯದ ಕ್ರಮವೇನು ? ಎಂಬುದರ ಬಗ್ಗೆ ಭಟ್ಟ ಪ್ರಭಾಕರರ ಮತಗಳಲ್ಲಿ ಭಿನ್ನಾಭಿ ಪ್ರಾಯವಿದೆ. ವಾಕ್ಯದ ಬಿಡಿ ಭಾಗಗಳನ್ನು (ಪದಗಳನ್ನು) ಅವುಗಳ ಅಭಿಧಾವೃತ್ತಿ ಯಿಂದ (ಅಭಿಹಿತ) ತಿಳಿದು ತನ್ಮೂಲಕ ಅವುಗಳ ಸಂಬಂಧ (ಅನ್ವಯ) ತಿಳಿಯುವ ಕ್ರಮವನ್ನು 'ಅಭಿಹಿತಾನ್ವಯವಾದ' ಎಂದು ಕರೆಯುತ್ತಾರೆ. ಇದು ಭಾಟ್ಟಮತ. ನಮ್ಮ ವ್ಯವಹಾರದಲ್ಲಿ ವಿಚಾರದಲ್ಲಿ–ವಾಕ್ಯ ಹಾಗೂ ವಾಕ್ಯಾರ್ಥ ಸ್ಫುರಣೆಯು ಅಖಂಡವೇ ಆಗಿರುತ್ತದೆ. ಆದ್ದರಿಂದ ಶಬ್ದಾರ್ಥ ತಾತ್ಪರ್ಯಾರ್ಥಗಳು ಒಂದಾದ ಮೇಲೊಂದು ಬರದೆ ಪದಗಳ ಅಭಿಧಾವೃತ್ತಿಯ ಜೊತೆಯಲ್ಲೇ ಅನ್ವಯವೂ

ಸೇರಿದ್ದು ತಾತ್ಪರ್ಯವೇ, ಶಬ್ದಾರ್ಥವನ್ನು ನಿರ್ದೇಶಿಸುತ್ತದೆ ಎನ್ನುವುದನ್ನು 'ಅನ್ವಿತಾಭಿಧಾನವಾದ' ಎಂದು ಕರೆಯುತ್ತಾರೆ. ಇದು ಗುರುಮತ. ಎಂದರೆ ಪ್ರಭಾಕರ ಮತ.

ವಾಕ್ಯೋತ್ತರವಾದ ಪ್ರಕರಣ ಪ್ರಬಂಧಗಳ ತಾತ್ಪರ್ಯಾರ್ಥವನ್ನೂ ಮೀಮಾಂಸದಲ್ಲಿ ಚರ್ಚಿಸಿದೆ. ಅದಕ್ಕಾಗಿ ಉಪಕ್ರಮ (ಆರಂಭ) ಉಪಸಂಹಾರ (ಮುಕ್ತಾಯ) ಅಭ್ಯಾಸ (ಪದೇ ಪದೇ ಬಂದದ್ದು) ಅಪೂರ್ವತಾ (ಬೇರೆಲ್ಲೂ ಹೇಳದೆ ಈ ಪ್ರಕರಣದಲ್ಲಿ ಹೇಳಿದ್ದು) ಫಲ, ಅರ್ಥವಾದ (ಹೆಚ್ಚು ಒತ್ತು ಕೊಡದೆ ಮನಸ್ಸಿಗೆ ಹಿಡಿಸಲು ಮಾಡುವ ಸ್ತುತಿ, ನಿಂದೆ ಇತ್ಯಾದಿ) ಎಂಬ ಆರು ಅಂಶಗಳಿಂದ ವಾಕ್ಯೋತ್ತರ ಮೀಮಾಂಸೆಯನ್ನು ಮಾಡುತ್ತಾರೆ.

ವಾಕ್ಯಲಕ್ಷಣವನ್ನು ಎಂಟು ವಿಧವಾಗಿ ಭರ್ತೃಹರಿ ಹೇಳಿದ್ದರೂ (ವಾಕ್ಯಪದೀಯದಲ್ಲಿ) ಮೀಮಾಂಸಕರು ಲಕ್ಷಣ ಹೇಳಿದ್ದಲ್ಲದೆ ವಾಕ್ಯದ ಕಲ್ಪನೆಯ ವ್ಯಾಪ್ತಿ ಹಿಗ್ಗಿಸಿದ್ದಾರೆ. ಒಂದು ಶ್ಲೇಷವಿದ್ದರೆ ವ್ಯಾಕರಣ ರೀತ್ಯಾ ಒಂದೇ ವಾಕ್ಯವಾದರೂ ಅರ್ಥಗತವಾಗಿ ಅದು ಎರಡು ವಾಕ್ಯಗಳಿಗೆ ಸಮ ಎಂದು ಮೀಮಾಂಸಕರು ಪರಿಗಣಿಸುತ್ತಾರೆ. ಹಾಗೆಯೇ ಶಬ್ದಗಳ ನಡುವೆ ಅರ್ಥ ವಿರೋಧವಿದ್ದರೆ ಅಥವಾ ಅಸಂಬದ್ಧವಾಗಿದ್ದರೆ ಹೇಗೆ ವಾಕ್ಯವಾಗುವುದಿಲ್ಲವೊ ಹಾಗೇ ವಾಕ್ಯಸರಣಿಗಳಲ್ಲಿ ವಿರೋಧ ಅಥವಾ ಅಸಂಬದ್ಧತೆ ಇದ್ದರೂ ಸ್ಪಷ್ಟಾರ್ಥವು ತಿಳಿಯುವುದಿಲ್ಲ. ಆದ್ದರಿಂದ ಒಂದು ಪ್ರಕರಣ ಅಥವಾ ಪ್ರಬಂಧದ ವಾಕ್ಯಗಳನ್ನು ಹಿಡಿದಿಡುವ 'ಏಕವಾಕ್ಯತೆ' ಕೂಡ ಮೀಮಾಂಸಕರ ಚರ್ಚೆಯಲ್ಲಿ ಮುಖ್ಯ. ಇದರಲ್ಲಿ ಭಿನ್ನರೀತಿಯ ವಾಕ್ಯ ವರ್ಗೀಕರಣ ಮತ್ತು ಪರಸ್ಪರ ಸಂಬಂಧಗಳ ಚರ್ಚೆಯೂ ಇದೆ.

### ಮೀಮಾಂಸಕರ ಶಬ್ದಾರ್ಥ ಚಿಂತನೆ

ಮೀಮಾಂಸಕರು ಶಬ್ದಾರ್ಥ ಸಂಬಂಧವನ್ನು 'ಔತ್ಪತ್ತಿಕ' ಎಂದಿದ್ದಾರೆ. (ಔತ್ಪತ್ತಿಕಸ್ತು ಶಬ್ದಸ್ಯಾರ್ಥೇನ ಸಂಬಂಧಃ) ಇದರ ಅರ್ಥ ಶಬ್ದ ಅದರ ಅರ್ಥ ಮತ್ತು ಆ ಸಂಬಂಧ ಅನಾದಿಯಾಗಿದ್ದು ನಿತ್ಯವಾಗಿರುತ್ತದೆ ಮತ್ತು ಈ ಸಂಬಂಧ ಪುರುಷಾಪೇಕ್ಷವನ್ನು ಮೀರಿದ್ದು. ವೇದದಲ್ಲಿ ಆನುಪೂರ್ವೀ ಸಮೇತವಾಗಿ ನಿತ್ಯವಾಗಿದ್ದರೆ ಬೇರೆ ಕಡೆಯಲ್ಲಿ ಯಾರೇ ಒಬ್ಬ ಪದ ಸೃಷ್ಟಿ ಮಾಡಲಾರ ಆದ್ದರಿಂದ ಶಬ್ದ ಅರ್ಥಗಳ ಸಂಬಂಧ ಯಾರೇ ಒಬ್ಬರು ಸೃಷ್ಟಿಸಿದ್ದಲ್ಲ, ಇಷ್ಟಾಗಿ ಒಬ್ಬರು ಅಪಪ್ರಯೋಗ ಮಾಡಿದಾಗ್ಯೂ ಅರ್ಥ ಪ್ರತೀತಿ ಆಗುವಾಗ ಶುದ್ಧ ಪ್ರಯೋಗವನ್ನೇ ಮನಸ್ಸಿಗೆ ತಂದುಕೊಳ್ಳುತ್ತೇವೆ. ಹಾಗಿಲ್ಲದಿದ್ದರೆ ಅರ್ಥ ಪ್ರತೀತಿಯೂ ಆಗುವುದಿಲ್ಲ. ವೇದದಲ್ಲಿ ಆಗಲಿ ಬೇರೆ ಕಡೆಯಲ್ಲಿ ಆಗಲಿ ಅನ್ಯ ಭಾಷೆಯಿಂದ ಒಂದು ಪದ ತೆಗೆದುಕೊಂಡರೆ ಆ ಮೂಲ ಭಾಷೆಯಲ್ಲಿನ ಅರ್ಥವನ್ನೇ ಆ ಶಬ್ದದ ಮೂಲಾರ್ಥವೆಂದು ತಿಳಿಯಬೇಕೆಂದೂ ಆಗ್ರಹವಾಗಿದೆ. ಇಲ್ಲಿಯೇ ಪಿಕ, ನೇಮಿ ಮುಂತಾದ ದ್ರಾವಿಡ ಶಬ್ದಗಳು ವೇದದಲ್ಲಿ, ಸಂಸ್ಕೃತದಲ್ಲಿ ಸೇರಿರುವುದನ್ನು ಗುರುತಿಸಲಾಗಿದೆ.

ಪ್ರಮಾಣಭೂತವಾದ ಒಂದು ವಾಕ್ಯದಲ್ಲಿನ ಒಂದು ಪದ ಅಥವಾ ವಾಕ್ಯಸರಣಿಯಲ್ಲಿನ ಒಂದು ವಾಕ್ಯ ಅಥವಾ ವಾಕ್ಯಖಂಡ ಅಸಂಗತವೋ ಅಬದ್ಧವೋ ಆಗಿ ತೋರಿದಾಗ ವಾಕ್ಯದ ಅರ್ಥದಿಂದ ಪದಕ್ಕೂ; ವಾಕ್ಯಸರಣಿಯಿಂದ ವಾಕ್ಯಕ್ಕೂ ಬೇರೆಯೇ ಒಂದು ಅರ್ಥವನ್ನು ಗ್ರಹಿಸುತ್ತೇವೆ. ಎಂದರೆ ಆದರ್ಶರೂಪದ ಶಬ್ದಾರ್ಥ ಸಂಬಂಧ ಒಂದಾದರೆ ವ್ಯಾವಹಾರಿಕವಾಗಿ ಅವುಗಳನ್ನು ಪರಸ್ಪರ ಹೊಂದಿಸಿಕೊಳ್ಳುವ ಕಡೆಗೂ ಗಮನ ಹರಿಸಿದೆ. ಶಬ್ದದಿಂದ ಅರ್ಥಗ್ರಹಿಸುವ ಮನಸ್ಸಿನ ಪ್ರಕ್ರಿಯೆಗೆ ವೃತ್ತಿ ಎಂದು ಹೆಸರು. ಶಬ್ದ ಒಂದಕ್ಕೆ ಕೋಶ, ವ್ಯವಹಾರಾದಿಗಳಿಂದ ಪ್ರಸಿದ್ಧವಾದ ಮುಖ್ಯ ಅರ್ಥಕ್ಕೆ ಅಭಿಧಾವೃತ್ತಿ ಎಂದೂ ಅಸಂಗತವಾದ ಅರ್ಥವನ್ನು ಬದಲಿಸಿ ವಾಕ್ಯಬಲದಿಂದ, ಸಂದರ್ಭಬಲದಿಂದ ಸುಸಂಗತಗೊಳಿಸಿಕೊಂಡು ಸಮಯೋಚಿತ ಅರ್ಥ ತೆಗೆದುಕೊಳ್ಳುವುದಕ್ಕೆ ಲಕ್ಷಣಾವೃತ್ತಿ ಎಂದು ಹೆಸರು. ಇರುವ ಅರ್ಥದ ಒಂದು ಭಾಗ ಬಿಟ್ಟು ಬಿಡುವ ಜಹತ್ ಲಕ್ಷಣ, ಇರುವ ಅರ್ಥ ಬಿಡದೆ ಇನ್ನೊಂದು ಅರ್ಥ ಸೇರಿಸುವ ಅಜಹತ್ ಲಕ್ಷಣ, ಸ್ವಲ್ಪಭಾಗ ಬಿಟ್ಟು ಇನ್ನೊಂದು ಸ್ವಲ್ಪಭಾಗದ ಅರ್ಥ ಸೇರಿಸುವ ಜಹಲ್ಲಜಹಲ್ಲಕ್ಷಣ ಎಂದು ಲಕ್ಷಣಾ ಮೂರು ವಿಧ. ಲಕ್ಷಣಾ ವೃತ್ತಿ ಮುಖ್ಯಾರ್ಥ ವೃತ್ತಿ ಶಬ್ದಪ್ರಯೋಗ, ವಾಕ್ಯ ವಿಚಾರ, ತಾತ್ಪರ್ಯಾರ್ಥ ಏಕವಾಕ್ಯತೆ ಎಂಬ ಕಲ್ಪನೆಗಳು ಮುಂದೆ ವೇದಾಂತಿಗಳಲ್ಲೂ, ಆಲಂಕಾರಿಕರಲ್ಲೂ ಒಂದು ಪಾಠ್ಯ ವಿವೇಚನೆಯಲ್ಲಿ ಪ್ರಭಾವ ಬೀರುವುದನ್ನು ಕಾಣಬಹುದು.

## ನ್ಯಾಯವೈಶೇಷಿಕರ ಪ್ರಮಾಣವಾಗಿ ಶಬ್ದ

ಕಣಾದ ಪ್ರಣೀತ ವೈಶೇಷಿಕ ಸೂತ್ರಗಳು ಪ್ರಮೇಯಗಳಾದ ಪದಾರ್ಥಗಳನ್ನೂ ಗೌತಮ ಪ್ರಣೀತ ನ್ಯಾಯಸೂತ್ರಗಳು ಪ್ರಮಾಣವನ್ನೂ ಮುಖ್ಯವಾಗಿ ಮಂಡಿಸಿದ ಜೋಡಿ ಶಾಸ್ತ್ರಗಳು ಕ್ರಿ.ಶ. ೧–೩ ನೇ ಶತಮಾನದಲ್ಲಿ ಬೆಳೆದು ಸರ್ವಶಾಸ್ತ್ರೋಪಕಾರಕಗಳಾದ ಈ ಎರಡು ಶಾಸ್ತ್ರಗಳನ್ನು ಸುಮಾರು ೧೧ನೇ ಶತಮಾನದಲ್ಲಿ ಗಂಗೇಶೋಪಾಧ್ಯಾಯ.

ನಂತರ ಒಂದೇ ಶಾಸ್ತ್ರವಾಗಿ ನ್ಯಾಯವೈಶೇಷಿಕ, ತರ್ಕ, ಅಥವಾ ನವೀನ ನ್ಯಾಯ ಎನಿಸಿ ಕೊಂಡಿದೆ. ಆಗ ಗೌತಮರ ಸೂತ್ರದಿಂದ ಬಂದದ್ದನ್ನು ಪ್ರಾಚೀನ ನ್ಯಾಯ ಎಂದಿದ್ದಾರೆ. ನ್ಯಾಯಶಾಸ್ತ್ರದಲ್ಲಿ ಜ್ಞಾನ ಕಾರಣವಾದ ಪ್ರಮಾಣಗಳನ್ನು ನಾಲ್ಕೆಂದು ಗುರುತಿಸಿದ್ದಾರೆ. ಅವು–ಪ್ರತ್ಯಕ್ಷ, ಅನುಮಾನ, ಉಪಮಾನ ಮತ್ತು ಶಾಬ್ದ. ಶಬ್ದವು ಭೌತಿಕವಾಗಿ ಆಕಾಶದ ಗುಣ. ಅದು ಶ್ರವಣಗೋಚರವಾಗಿ ನಿಯತವಾಗಿ ಮನಸ್ಸಿನಲ್ಲಿ ಒಂದು ವಿಷಯದ ಸಂಜ್ಞೆ ಮೂಡಿಸಿದರೆ ಆಗ ಅದು ಸಂಜ್ಞಾ ಆ ಸಂಜ್ಞಾಸಂಜ್ಞೀ ಸಂಬಂಧವೇ ಶಬ್ದಾರ್ಥ ಸಂಬಂಧ (ಶಕ್ತಿ). ಈ ಸಂಬಂಧದಿಂದ, ಬೇರೆ ಪ್ರಮಾಣಗಳಿಂದ ಬಂದ ಅರ್ಥಕ್ಕೆ ವಿರುದ್ಧವಲ್ಲದ ಅರ್ಥ ಬಂದಿದ್ದರೆ ಮತ್ತು ಆ ಮಾತುಗಳು ಆಪ್ತರದ್ದಾಗಿದ್ದರೆ ಆಗ ಒಂದು ಜ್ಞಾನ ಉಂಟಾಗುತ್ತದೆ. ಅದು ಶಾಬ್ದಜ್ಞಾನ. ಹೀಗೆ ಶಾಬ್ದಜ್ಞಾನ ಉಳಿದ ಪ್ರಮಾಣಗಳಿಂದ ಬಂದ ಜ್ಞಾನಕ್ಕಿಂತ ಕೆಳವರ್ಗದಲ್ಲಿದ್ದರೂ

ಉಳಿದ ಪ್ರಮಾಣಗಳೂ ಪೂರ್ಣವಾಗುವುದು ಶಬ್ದದಿಂದಲೇ ''ಪದಸ್ಯಾರ್ಥಃ ಪದಾರ್ಥಃ ಇತ್ಯಸ್ಮಾತ್ ಅಭಿಧೇಯತ್ವಂ ಪದಾರ್ಥ ಸಾಮಾನ್ಯ ಲಕ್ಷಣಂ'' ಎಂದು ಪದದ ಅರ್ಥವೇ ಪದಾರ್ಥವಾದ್ದರಿಂದ ಜಗತ್ತಿನಲ್ಲಿ ಪದಾರ್ಥ ಎಂದರೇನೇ ಅದಕ್ಕೊಂದು ಹೆಸರಿರಬೇಕು. ಎನ್ನುವದಾಗಿ ತರ್ಕ ಸಂಗ್ರಹ ಬರೆದ ಅನ್ನಂಭಟ್ಟನ ಮಾತು. ಒಂದು ವಸ್ತುವನ್ನು ನೋಡಿದಾಗ ಯಾವುದೋ ಒಂದು ವಸ್ತು ಎಂದು ನೋಡುವುದು ನಿರ್ವಿಕಲ್ಪಕ ಪ್ರತ್ಯಕ್ಷ. ಇದು ಇಂಥದೇ ವಸ್ತು ಎಂದು ಅದರ ಹೆಸರನ್ನೂ ಸೇರಿಸಿಕೊಂಡು ನೋಡಿದಾಗ ಸವಿಕಲ್ಪಕ ಪ್ರತ್ಯಕ್ಷ. ಎಂದರೆ ಪ್ರತ್ಯಕ್ಷ. ಪೂರ್ಣವಾಗುವುದು ಸಂಜ್ಞಾ ಸಮೇತವಾಗಿಯೇ. ಅನುಮಾನದಲ್ಲೂ ಅನುಮೇಯವನ್ನು ಮಂಡಿಸುವುದು ಮೂರು ಅಥವಾ ಐದು ಅವಯವ ವಾಕ್ಯಗಳ ಮೂಲಕವೇ. ಹಾಗೆ ಮಂಡಿಸಿದಲ್ಲಿ ಇನ್ನೊಬ್ಬರ ಜತೆಗೆ ಚರ್ಚೆ ಮಾಡುವಾಗಿನ ವಿಧಾನದ ಮೂಲಕ ತರ್ಕ (ಪರಮತ ಖಂಡನೆ ಸ್ವಮತ ಸ್ಥಾಪನೆ)ವಾದ (ಸ್ವಮತ ಸ್ಥಾಪನೆ) ಜಲ್ಪ (ಎರಡೂ ಇಲ್ಲದ ಬರಿ ಮಾತು) ವಿತಂಡ (ಕೇವಲ ಪರಮತ ಖಂಡನೆ) ಎಂಬ ವಾಗ್ ವೈಖರಿಗಳ ಪ್ರಸ್ತಾಪ ವಿಶೇಷವಾಗಿ ಪ್ರಾಚೀನರಲ್ಲಿದೆ. ಉಪಮಾನ ಪ್ರಮಾಣದಲ್ಲಿಯೂ ಉಪಮಾ ವಾಕ್ಯದಿಂದ ಕೂಡಿದ ಮನಸ್ಸು ಉಪಮೇಯವನ್ನು ಕಂಡಾಗಲೇ ಉಪಮಾನ ಪ್ರಮಾಣ ಸಿದ್ಧವಾಗುವುದು. ಹೀಗೆ ಶಬ್ದವು ಸರ್ವ ಪ್ರಮಾಣಗಳಿಗೂ ಉಪಸ್ಕಾರಕ. ಶಬ್ದ ಪ್ರಮಾಣಕ್ಕೂ ಆಪ್ತರ 'ವಾಕ್ಯ'ವೇ ಆಧಾರ. ವಾಕ್ಯವು ಪದಗಳ ಗುಂಪು. ಶಕ್ತಿ ಇರುವುದೇ ಪದ. ಅರ್ಥ ವಂತಿಕೆಯೇ ಶಕ್ತಿ. ಪ್ರಾಚೀನರ ಪ್ರಕಾರ ಈ ಶಕ್ತಿ ಈಶ್ವರ ಕೃತ ಸಂಕೇತ, ನವೀನರ ಪ್ರಕಾರ ಈ ಶಕ್ತಿ ಸಮಾಜದ ಸಮಯ ಅಥವಾ ಒಪ್ಪಂದ. ಇಬ್ಬರಲ್ಲೂ ಸಂಕೇತ, ಸಾಂಕೇತಿಕ ಅಥವಾ ಸಂಜ್ಞಿ ಸಂಜ್ಞೆಗಳಾದ ಶಬ್ದವಾಗಲೀ ಶಬ್ದಾರ್ಥ ಸಂಬಂಧವಾಗಲೀ ನಿತ್ಯವಲ್ಲ.

ಯಾವುದೇ ವಿಷಯವನ್ನು ಮಂಡಿಸುವಾಗ ಹೇಳುತ್ತಿರುವ ಮಾತುಗಳು ಎಷ್ಟರ ಮಟ್ಟಿಗೆ ವ್ಯಾಪ್ತಿ ಪಡೆದಿವೆ. ಏನೇನು ಒಳಗೊಳ್ಳುತ್ತದೆ, ಎನ್ನುವುದು ಅವಚ್ಛಿನ್ನ ಏನೇನನ್ನು ಹೊರತು ಪಡಿಸುತ್ತದೆ ಎನ್ನುವುದು ಅವಚ್ಛೇದಕ. ಒಂದು ಸಾಮಾನ್ಯವನ್ನು ಎಂದರೆ ಜಾತಿಯನ್ನು ಇನ್ನೊಂದು ವಿಶೇಷವನ್ನು ಎಂದರೆ ವ್ಯಕ್ತಿಯನ್ನು ತಿಳಿಸುತ್ತದೆ. ಉದಾ : ಹಸು ಹಾಲು ಕೊಡುತ್ತದೆ. ಎನ್ನುವಲ್ಲಿ 'ಹಸು' ಜಾತಿವಾಚಕ 'ಹಸುವನ್ನು ಕಟ್ಟಿ ಹಾಕು' ಎನ್ನುವಲ್ಲಿ 'ಹಸು' ವ್ಯಕ್ತಿವಾಚಕ. ಈ ಅವಚ್ಛಿನ್ನ ಅವಚ್ಛೇದಕಗಳ ಮೂಲಕವೇ ನಿಶ್ಚಿತವಾದ ಅರ್ಥ ತಿಳಿಯುವುದು. ಈ ಕ್ರಮಕ್ಕೆ 'ಶಾಬ್ದಬೋಧ' ಎಂದು ಹೆಸರು. ಶಬ್ದ ಜಾತಿಯನ್ನು ಹೇಳುತ್ತದೋ ವ್ಯಕ್ತಿಯನ್ನು ಹೇಳುತ್ತದೋ ಎಂಬ ವಾದ ವ್ಯಾಕರಣ ಮೀಮಾಂಸಾಗಳಲ್ಲಿದ್ದರೂ ಅವೆರಡನ್ನು ಕೂಡಿಸಿಕೊಂಡು ಶಾಬ್ದಬೋಧ ಹೇಳುವ ಪ್ರಕ್ರಿಯೆ ನ್ಯಾಯಕ್ಕೆ ವಿಶೇಷವಾದದ್ದು. ಶಾಸ್ತ್ರಗಳಲ್ಲಿ ಪ್ರಧಾನವಾದ ಲಕ್ಷಣ ಮಂಡಿಸುವಲ್ಲೂ ಅವುಗಳನ್ನು ಪರಿಷ್ಕರಿಸುವುದರಲ್ಲೂ ತರ್ಕ ವಾದಗಳಲ್ಲಿ ಹೆತು (ಕಾರಣ) ಉದಾಹರಣೆ ಕೊಡು ವಾಗಿನ ನಿಗಮನ ಅನುಗಮನ ಪದ್ಧತಿಗಳಲ್ಲೂ ಇದು ವಿಶೇಷ ಉಪಕಾರಕವಾದ ಕಲ್ಪನೆ.

ಆಪ್ತ ವಾಕ್ಯಕ್ಕೆ ಸಾಮರ್ಥ್ಯ ಬರುವುದು ಆಕಾಂಕ್ಷಾ, ಯೋಗ್ಯತಾ ಮತ್ತು ಸನ್ನಿಧಿ ಎಂಬ ಮೂರು ಗುಣಗಳಿಂದ ವಾಕ್ಯದ ಪದಗಳು ಒಂದು ಇನ್ನೊಂದನ್ನು ಅಪೇಕ್ಷಿಸಿ ಸುಸಂಬದ್ಧ ವಾಗುವಂತೆ ಪ್ರತ್ಯಯಗಳನ್ನು ಹೊಂದಿರುವುದು ಆಕಾಂಕ್ಷಾ. ಸುಸಂಬದ್ಧ ವಾಕ್ಯವು ಪ್ರತ್ಯಕ್ಷಾದಿ ಪ್ರಮಾಣಗಳಿಗೆ ವಿರುದ್ಧವಲ್ಲದ ಅರ್ಥಕೊಡುವುದು ಯೋಗ್ಯತಾ. ಅಕ್ಷರ ಗಳು ಗೊಂದಲಗೊಳ್ಳದೆ ಆದರೆ ಅಕ್ಷರ, ಪದಗಳ ಉಚ್ಚಾರಣೆ ನಡುವೆ ಮನಸ್ಸು ತಿರುಗಿಸುವ ತಡೆಯಿಲ್ಲದ ಕಾಲೈಕ್ಯ ಸನ್ನಿಧಿ.

## ಸೌಂದರ್ಯವೆಂಬ ನಾಲ್ಕನೆ ಆಯಾಮ

ಪದ ವಾಕ್ಯ ಪ್ರಮಾಣಗಳ ಜತೆಗೆ ಸೌಂದರ್ಯ ಎನ್ನುವುದು ವಾಕ್‌ನ ನಾಲ್ಕನೆ ಆಯಾಮ ಎಂದೂ ಅದನ್ನು ಕುರಿತು ಚರ್ಚಿಸುವುದೇ ಅಲಂಕಾರ ಶಾಸ್ತ್ರ ಎಂದು ಕುಂತಕನು ವಕ್ರೋಕ್ತಿ ಜೀವಿತದಲ್ಲಿ ಹೇಳಿದ್ದಾನೆ. ಮೂರು ಶಾಸ್ತ್ರಗಳಿಂದ ಬೇಕಾದ ನೆರವನ್ನು ಪಡೆದು 'ಕಾವ್ಯಭಾಷೆ'ಯನ್ನು ಕುರಿತು ಚರ್ಚೆ ನಡೆಸಿದ ಎರಡು ಪ್ರಮುಖ ಪಂಥಗಳು ಧ್ವನಿ ಮತ್ತು ವಕ್ರೋಕ್ತಿ ಪಂಥಗಳು. ಧ್ವನಿ ಪ್ರಸ್ಥಾನ ವೈಯ್ಯಾಕರಣರ ಸ್ಫೋಟ ವಾದದಿಂದ ಪ್ರಭಾವಿತವಾಗಿರುವುದು ಸ್ಪಷ್ಟ. ಹಾಗೆಯೇ ವಕ್ರೋಕ್ತಿಯು ವರ್ಣ, ಪದ, ಪ್ರತ್ಯಯ, ವಾಕ್ಯ–ಪ್ರಕರಣಗಳ ಹಂತದಲ್ಲಿ ನಿತ್ಯ ಬಳಕೆಗಿಂತ ಭಿನ್ನವಾಗಿ ಅದೇ ಭಾಷಿಕ ಅಂಶಗಳನ್ನು ಬಳಸಿದಾಗ ಹೇಗೆ ಸೌಂದರ್ಯ ಬರುವುದೆಂದೂ ತೋರಿಸಿದ್ದಾನೆ. ಭಾಷೆಯ ವಿಂಗಡಣೆಯೊಂದಿಗೆ ಅದರ ಸಂಯೋಗದಿಂದ ಬರುವ ಅರ್ಥಕ್ಕೆ ಒಂದು ಕಡೆ ಜ್ಞಾನವೂ ಇನ್ನೊಂದು ಕಡೆ ಸೌಂದರ್ಯವೂ ಗಮ್ಯವಾದ ವಿಷಯ ಹೇಳುತ್ತಲೇ ಭಾಷೆಯ 'ಸತ್ಯ'ದ ಜೊತೆಗೆ ಸೌಂದರ್ಯದ ಮೀಮಾಂಸೆ ನಡೆದಿದೆ. ಭಟ್ಟತೌತ 'ಮಾತೆಂಬುದು ಶಾಸ್ತ್ರ, ಕಾವ್ಯ ಎಂದು ಎರಡು ವಿಧ' ಎಂದಿದ್ದ.

ವ್ಯಾಕರಣ, ಮೀಮಾಂಸ ಮತ್ತು ತರ್ಕಶಾಸ್ತ್ರಗಳು ಪ್ರಮುಖವಾಗಿ ಭಾಷೆಯನ್ನು ಚರ್ಚಿಸಿದ್ದು ಕ್ರಮವಾಗಿ ಪದ–ವಾಕ್ಯ–ಪ್ರಮಾಣ ಶಾಸ್ತ್ರಗಳೆನಿಸಿದ್ದರೂ ಮೂರೂ ಶಾಸ್ತ್ರಗಳು ಮೂರೂ ವಿಷಯಗಳನ್ನು ಭಿನ್ನ ರೀತಿಗಳಲ್ಲಿ ಚರ್ಚಿಸಿವೆ ಮತ್ತು ಕೆಲವಂಶಗಳಲ್ಲಿ ಸಾಮ್ಯವೂ ಮತ್ತು ಕೆಲವಂಶಗಳಲ್ಲಿ ವಿರೋಧವೂ ಇದೆ. ಭಾಷೆಯ ಮೂಲ ಘಟಕ 'ವಾಕ್ಯ' ಎಂದೇ ವ್ಯಾಕರಣಜ್ಞರು ಬಗೆಯುತ್ತಾರೆ. ಹಾಗಿದ್ದರೆ ವರ್ಣ, ಪದ ಎಂದೆಲ್ಲ ವಿಭಜನೆ ಏಕೆ ಎಂದರೆ–ಕೇವಲ ವ್ಯವಹಾರಕ್ಕೆ, ಅದೆಲ್ಲ ಕೃತಕ ಎಂದು ಹೇಳಿದೆ. ಆದರೆ ತಾರ್ಕಿಕರ (ನೈಯ್ಯಾಯಿಕರ) ಪ್ರಕಾರ ಪದವೇ ಭಾಷೆಯ ಘಟಕ ಅದರಿಂದಲೇ ಅರ್ಥಬೋಧ. ಆದ್ದರಿಂದ ಮೀಮಾಂಸಕರ ಪ್ರಕಾರ ವರ್ಣಗಳೇ ಭಾಷೆಯ ಮೂಲ ಘಟಕ. ಒಂದು ಭಾಷೆಯ ಅವಿನಾಶಿಯಾದ ಮೂಲರೂಪಗಳು ಅದರ ವರ್ಣಗಳೇ ಆದ್ದರಿಂದ.

## ಶಬ್ದ ಶಕ್ತಿ

ಒಂದು ಶಬ್ದ-ಸಂಕೇತ ಅಥವಾ ವಾಚಕ ಒಂದು ಅರ್ಥವನ್ನು ಪ್ರತಿನಿಧಿಸುತ್ತದೆ. ಆದ್ದರಿಂದ ಅರ್ಥ- ವಾಚ್ಯ ಅಥವಾ ಸಂಕೇತಿತ ಅಥವಾ ಸಂಜ್ಞೆ. ಒಂದು ಶಬ್ದಕ್ಕೆ ಇನ್ನೊಂದು ಶಬ್ದ ಅರ್ಥವಾಗದು. ಆದರೆ ಅರ್ಥಒಂದರ ಕಲ್ಪನೆ ಕೊಟ್ಟದ್ದು ಮಾತ್ರ ಶಬ್ದ. ಹೀಗೆ ಅರ್ಥಸ್ಫುರಣದ ಯೋಗ್ಯತೆಯೇ ಶಬ್ದದ ಶಕ್ತಿ. ನೈಯ್ಯಾಯಿಕರ ಪ್ರಕಾರ ಸಂಸ್ಕೃತ ಶಬ್ದಗಳಿಗೆ ಮಾತ್ರ ಶಕ್ತಿ ಇದೆ. ಆದರೆ ವೈಯ್ಯಾಕರಣರ ಪ್ರಕಾರ ಅಪಭ್ರಂಶ ಗಳಿಗೂ ಶಕ್ತಿಯಿದೆ. ಮೀಮಾಂಸಕರು ಅಪಭ್ರಂಶಗಳೂ ಸಂಸ್ಕೃತ ರೂಪದ ಮುಖೇನ ಅರ್ಥ ಬೋಧಕ ಎಂದಿದ್ದಾರೆ. ಆದರೂ ಮ್ಲೇಚ್ಛ ಶಬ್ದಗಳಿಗೆ ಅದನ್ನಾಡುವ ಆಯಾ ಜನಗಳು ಕೊಡುವ ಅರ್ಥವನ್ನೇ ತೆಗೆದುಕೊಳ್ಳಬೇಕು ಎಂದಿದ್ದಾರೆ. ಅಲಂಕಾರ ಶಾಸ್ತ್ರ ದಲ್ಲಿ ಶಕ್ತಿ ಎನ್ನುವುದನ್ನು ಪ್ರತಿಭಾ ಎನ್ನುವುದಕ್ಕೆ ಸಮನಾಗಿಸಿದ್ದಾರೆ. ಕವಿಯಲ್ಲಿ ಅದು ಕಾರಯಿತ್ರಿ. ಕೇಳುಗನಲ್ಲಿ ಅದು ಭಾವಯಿತ್ರೀ.

## ಶಾಬ್ದಬೋಧ/ವಾಕ್ಯಾರ್ಥ ಬೋಧ

'ಶಬ್ದದಿಂದ ತಿಳಿದದ್ದೆ ಶಾಬ್ದಬೋಧ (ಶಬ್ದಾತ್ ಜಾಯಮಾನಃ ಬೋಧಃ) ನೈಯ್ಯಾ ಯಿಕರು ಶಾಬ್ದಬೋಧವೆಂಬ ಫಲಕ್ಕೆ ಪದಜ್ಞಾನವೇ ಕಾರಣ, ಪದಾರ್ಥದ ಬುದ್ಧಿಯೇ ದ್ವಾರ, ಶಕ್ತಿ (ಪದ-ಪದಾರ್ಥ ಸಂಬಂಧ) ಜ್ಞಾನ ಸಹಕಾರೀ ಎಂದು ಹೇಳುತ್ತಾರೆ. (ಪದಜ್ಞಾನಂತು ಕರಣಂ ದ್ವಾರಂತತ್ರ ಪದಾರ್ಥಧೀಃ

ಶಾಬ್ದಬೋಧಃ ಫಲಂ ತತ್ರ ಶಕ್ತಿಧೀಃ ಸಹಕಾರಿಣೀ)

-ಕಾರಿಕಾವಲೀ ೮೧

ಶಕ್ತಿಜ್ಞಾನ ಬರುವುದು-ವ್ಯಾಕರಣ, ಹೋಲಿಕೆ, ನಿಘಂಟು, ಆಪ್ತವಾಕ್ಯ, ಲೋಕ ವ್ಯವಹಾರ, ವಾಕ್ಯದ ಉಳಿದ ಭಾಗ, ವಿವರಣೆ, ತಿಳಿದ ಪದದ ಸನ್ನಿಧಿ, ಇವುಗಳಿಂದ ಎಂದಿದೆ :

(ಶಕ್ತಿಗ್ರಹಂ ವ್ಯಾಕರಣೋಪಮಾನ ಕೋಶಾಪ್ತವಾಕ್ಯ ವ್ಯವಹಾರತಶ್ಚ

ವಾಕ್ಯಸ್ಯ ಶೇಷಾದ್ವಿವೃತೇರ್ವದಂತಿ ಸಾನ್ನಿಧ್ಯತಃ ಸಿದ್ಧಪದಸ್ಯ ವೃದ್ಧಾಃ)

ಶಬ್ದಶಕ್ತಿ ಪ್ರಕಾಶಿಕಾ ವ್ಯಾಖ್ಯಾ

ಶಾಬ್ದಬೋಧವೂ ವಾಕ್ಯಾರ್ಥವೂ ಒಟ್ಟಿಗೆ ಸಂಬದ್ಧವಾದವು

ವಾಕ್ಯಲಕ್ಷಣಗಳು ಎಂಟು ಎಂದು ಭರ್ತೃಹರಿ ತಿಳಿಸಿದ್ದಾನೆ. ಅವು-

೧) ಕ್ರಿಯಾಪದ (ಆಖ್ಯಾತ) ಕೇಂದ್ರಿತವಾದದ್ದು- 'ಆಖ್ಯಾತಂ ಶಬ್ದಮ್'

೨) ಪದಗಳ ಗುಂಪು-ಪದಸಂಘಟನಾ

೩) ಪದಗಳ ಸಮೂಹದ ಮೂಲದಲ್ಲಿರುವ ಜಾತಿ, -'ಸಂಘಟನಾ ವರ್ತಿನೀ ಜಾತಿಃ'

೪) ಅವಯವಗಳಾಗಿ ವಿಂಗಡಿಸಲಾಗದ ಅರ್ಥಕೊಡುವ ಒಟ್ಟುನುಡಿ– 'ಏಕೋ ಅನವಯವಃ ಶಬ್ದಃ

೫) ಪದಗಳ ಪೂರ್ವಾಪರ್ಯ–'ಕ್ರಮ'

೬) ಬುದ್ಧಿಗೋಚರವಾದ ಹೊಳಹಿಗೆ ಕಾರಣವಾದದ್ದು– 'ಬುದ್ಧ್ಯನುಸಂಹೃತಿ'

೭) ಮೊದಲ ಪದ–ಅದನ್ನನುಸರಿಸಿದ ಉಳಿದ ಪದಗಳು– 'ಆದ್ಯಂ ಪದಂ'

೮) ಆಕಾಂಕ್ಷಾ ಸಹಿತವಾದ ಪದಗಳು– 'ಪೃಥಕ್ ಸರ್ವಪದಂ ಸಾಕಾಂಕ್ಷಂ'

೩,೪,೬ ನೇ ಮತಗಳು ಅಖಂಡವಾಕ್ಯ ಪರದವಾದರೆ ಉಳಿದವು ಸಖಂಡವಾಕ್ಯ ಪರವಾದವು.

ಶಾಬ್ದಬೋಧ ಅಥವಾ ವಾಕ್ಯಾರ್ಥ ಬೋಧವಾಗುವಲ್ಲಿ ವೈಯ್ಯಾಕರಣರು ಮತ್ತು ಮೀಮಾಂಸಕರು ಕ್ರಿಯಾಪದವೇ ವಾಕ್ಯದ ಕೇಂದ್ರವೆಂದು ಬಗೆಯುತ್ತಾರೆ. ಆಕಾಂಕ್ಷೆ ನೀಗುವುದು ಕ್ರಿಯಾಪದದಲ್ಲೇ ಎಂದು ಅವರ ವಾದ. ನೈಯ್ಯಾಯಿಕರು ಪ್ರಥಮಾ ವಿಭಕ್ತಿಯಲ್ಲಿರುವ ಪದ–ಮುಖ್ಯ ವಿಶೇಷ ಎನಿಸಿದ್ದು ಅದೇ ಮುಖ್ಯವೆನ್ನುತ್ತಾರೆ. ಇದರಿಂದ ಶಾಬ್ದಬೋಧ ಹೇಳುವ ರೀತಿಗಳು ಭಿನ್ನವಾಗುತ್ತವೆ.

## ವಾಕ್‌ತತ್ವ

'ಕುಂಬಾರನ ಮನೆಗೆ ಹೋಗಿ ಮಡಕೆ ಮಾಡು' ಎಂದಂತೆ ಯಾರೂ ವೈಯ್ಯಾಕರಣಿಯಲ್ಲಿ ಹೋಗಿ ಶಬ್ದ ಸೃಷ್ಟಿಸು ಎನ್ನುವುದಿಲ್ಲ. ಪ್ರಯೋಗದಲ್ಲಿರುವ ಮಾತಿನ ಕ್ರಮಗಳಿಗೆ ವ್ಯಾಕರಣ ಕಟ್ಟುಪಾಡು ಗುರುತಿಸುತ್ತದೆ. ಎಂದು ಹೇಳುವ ಪತಂಜಲಿ– 'ಇದು ಯಾರ ಪ್ರಯೋಗ ?–ಶಿಷ್ಟರದು. ಶಿಷ್ಟರು ಯಾರು ? – ಆರ್ಯಾವರ್ತದ ಬಲ್ಲಿದರ, ಶಾಸ್ತ್ರವೇತ್ತರ ಪ್ರಯೋಗ' ಎಂದು ಆ ಪ್ರಯೋಗದ ಎಲ್ಲೆಯನ್ನೂ ಅದಕ್ಕೆ ಅನ್ಯತ್ರ ಇರುವ ಭೇದಗಳನ್ನೂ ಗುರುತಿಸಿದ್ದಾನೆ. ಪಾಣಿನಿಯ ವ್ಯಾಕರಣದ 'ಶಿಷ್ಟ ಮಾನ್ಯ'ತೆಗೆ ಪ್ರತಿಯಾಗಿ ಸರ್ವಮಾನ್ಯವಾದ 'ಸರ್ವಭಾಷಾ ಸರಸ್ವತಿ'ಯ ಕಲ್ಪನೆ ಜೈನರಲ್ಲಿದೆ, ಅದರಂತೆ ಸಮವಸರಣದಲ್ಲಿ ಜಿನ ಭಗವಾನರು ನುಡಿದದ್ದು ಅವರವರಿಗೆ ಅವರವರ ಭಾಷೆಯಲ್ಲಿ ತಿಳಿಯುತ್ತದೆ. ಎಂದು ಜೈನರು ಭಾವಿಸುತ್ತಾರೆ.

ನಾಗವರ್ಮನು 'ಕತ್ತಲು ಹೋಗಲಾಡಿಸುವ ಪರಂಜ್ಯೋತಿ (ಭಗವಾನ್) ಸ್ವರೂಪಾಗಿ ಯಾರ ಬಾಯಿಂದ ಹೊರಟ ಸರಸ್ವತೀ (ಮಾತು) ಸರ್ವಭಾಷಾ ರೂಪಿಣಿಯೋ ಅಂತಹ ಸರ್ವಜ್ಞನನ್ನು ವಂದಿಸುವೆ' ಎಂದಿದ್ದಾನೆ. (ಕರ್ನಾಟಕ ಭಾಷಾ ಭೂಷಣದ ಮಂಗಲ ಶ್ಲೋಕ).

ಭಟ್ಟಾಕಳಂಕನು–ಭಗವದ್ಭಾಷೆಯು ಹುಟ್ಟುವಾಗ ಸಮುದ್ರಘೋಷದಂತೆ– 'ಅವ್ಯಕ್ತವಾದ' ಒಂದೇ ಭಾಷೆ. ಆದರೂ ಕೇಳುವವರ ಕಿವಿಗೆ ತಾಗಿದಾಗ ಆಯಾ ಜನರ ಭಾಷೆಯಾಗಿ ವಿಚಿತ್ರ ಶಕ್ತಿಯ ಕಾರಣದಿಂದ ಬದಲಾಗುತ್ತದೆ. ಭಗವಂತನ ಮಾತನ್ನೇ ದೇವರು ದೈವೀ ಎಂದು, ನರರು ನಾರೀ, ಶಬರರು ಶಾಬರೀ, ಪ್ರಾಣಿಗಳು ಪ್ರಾಣಿ ಭಾಷೆ ಎಂದು ತಿಳಿಯುತ್ತಾರೆ.

(ಭಗವದ್ಭಾಷಾಪಿ ಸ್ಫೋತ್ಪತ್ತಿಸಮಯೇ ಸಮುದ್ರ ಘೋಷವತ್
'ಅವ್ಯಕ್ತೈಕ ಭಾಷಾ' ರೂಪಾದಿ.........)
ದೇವಾ ದೈವೀಂ ನರಾ ನಾರೀಂ ಶಬರಾಶ್ಚಾಪಿ ಶಾಬರೀಂ ।
ತಿರ್ಯಞ್ಚೋಪಿಚೆತ್ತೈರಶ್ಚೀಂ ಮೇನಿರೇ ಭಗವದ್ಗಿರಃ ॥

–ಶಬ್ದಾನುಶಾಸನ

ಕೇಳಿಸುವ ಶಬ್ದ ಉತ್ಪನ್ನ ವಿನಷ್ಟವಾದದ್ದು, ಶಬ್ದವಾದ ಕೂಡಲೇ ನಾಶವಾಗುವುದು, ಅದು ಮನಸ್ಸಿನಲ್ಲಿ, ಸಮುದಾಯದಲ್ಲಿ, ಕಾಲಾಂತರಕ್ಕೂ ಉಳಿಯುವುದು ಹೇಗೆ ? ಎಂಬ ಜಿಜ್ಞಾಸೆ ಇದೆ. ಜೈನರು 'ಅವ್ಯಕ್ತ'ವಾದ ಅತೀತ ಭಾಷೆ (Meta Language) ಬಗ್ಗೆ ಹೇಳಿದಂತೆ ವೇದಾಂತದಲ್ಲಿ ಶಬ್ದಬ್ರಹ್ಮದ ಕಲ್ಪನೆಯಿದೆ.* ವ್ಯಾಕರಣ ವೇದಾಂತಿ ಭರ್ತೃಹರಿಯು ಈ ನಿಟ್ಟಿನಲ್ಲಿ ಮೌಲಿಕವಾದ ಚರ್ಚೆ ಆರಂಭಿಸಿದ. ಪಾಣಿನಿಗಿಂತ ಹಿಂದೆ ಇದ್ದ ಸ್ಫೋಟಾಯನ ರಿಂದಲೇ ಬಂದದ್ದೆನ್ನುವ 'ಸ್ಫೋಟ' ತತ್ವ, ಹುಟ್ಟಿದಾಗಲೆ ನಾಶವಾದ ಶಬ್ದದ ಹಿಂದೆ ಅವಿನಾಶಿಯಾದ 'ಶಬ್ದ' ಇದೆ ಎನ್ನುತ್ತದೆ. ಸ್ಫೋಟಕವು ವರ್ಣಗಳಿಗಿಂತ ಭಿನ್ನ ವಾದದ್ದು, ವರ್ಣಗಳು ಅಭಿವ್ಯಂಜಿಸುವುದು ಯಾವುದೋ ಅದು ಮತ್ತು ಅರ್ಥ ಗೋಚರಿ ಸಲು ಕಾರಣವಾದದ್ದು, ಸ್ಫುಟತೆ–ಎಂದರೆ ಸ್ವತಃ ತೆರೆದು ಕೊಳ್ಳುವುದು, ವರ್ಣಗಳು ಯಾವುದನ್ನು ಸ್ಫುರಿಸುತ್ತದೋ ಅಥವಾ ಅರ್ಥ ಯಾವುದರಿಂದ ಸ್ಫುರಿಸುತ್ತದೋ ಅದು ಸ್ಫೋಟ. ಈ ಸ್ಫೋಟರೂಪದ ಶಬ್ದವೇ ನಿತ್ಯ. ಇದು ಚಿತ್ತದಲ್ಲಿದ್ದು ಆ ಚಿತ್ತದಲ್ಲಿನ ಅರ್ಥದ ಜತೆಗೆ ಅವಿನಾಭಾವಿ ಸಂಬಂಧ ಪಡೆದಿರುತ್ತದೆ.

### ಸ್ಫೋಟ

ಸ್ಫೋಟವು ಜಾತಿ ಅಥವಾ ವ್ಯಕ್ತಿ ಸ್ಫೋಟವಾಗಬಹುದು. ವ್ಯಕ್ತಿ ಸ್ಫೋಟ ಸಖಂಡ–ಅಖಂಡ ಎಂದಿರಬಹುದು. ಜಾತಿ–ವ್ಯಕ್ತಿಸ್ಫೋಟಕಗಳೆರಡರಲ್ಲೂ ವರ್ಣ–ಪದ–ವಾಕ್ಯ ರೂಪಗಳಿರಬಹುದು. ಅಖಂಡ ವ್ಯಕ್ತಿ ಸ್ಫೋಟದಲ್ಲಿ–ಪದ, ವಾಕ್ಯ–ರೂಪಗಳೆರಡೆ.




ಶಿಕ್ಷಣಕ್ಕಾಗಿ ಇಷ್ಟೆಲ್ಲ ರೀತಿಗಳನ್ನು ಹೇಳಿದರೂ ವಾಸ್ತವವಾಗಿ ಅಖಂಡ ವಾಕ್ಯ ಸ್ಫೋಟ ಒಂದೇ ಇರುವುದೆಂದೂ ಭರ್ತೃಹರಿ ಹೇಳುತ್ತಾನೆ.

---

ನೋಡಿ : ಮೈತ್ರಾಯಣಿ ಉಪನಿಷತ್ ಭವಭೂತಿ.

ಹೊರಗೆ ಬಾಯಿಂದ ಬಂದ ಕಿವಿಗೆ ಕೇಳುವ ವರ್ಣಾದಿಗಳು–ನಾವು ಆಡಿದ ಮಾತು–ವೈಖರಿ. ಈ ವೈಖರಿಗಳ ಮೂಲ ರೂಪ–ಚಿತ್ತದ್ದಲ್ಲಿದ್ದು ವೈಖರಿಯನ್ನು ಬಾಯಿಂದ ಆಡಿಸುವುದು–ಮಧ್ಯಮಾ ವಾಕ್. ಆದರೆ ಈ ಅರ್ಥಕ್ಕೆ ಈ ಶಬ್ದ, ಈ ಇಂಗಿತಕ್ಕೆ ಈ ಶಬ್ದದ ಈ ವರ್ಣಗಳೇ ಬರಬೇಕೆಂದು ಆಗುವುದು ಶಬ್ದಾರ್ಥಗಳ ಅಭೇಧವಿರುವ ಪಶ್ಯಂತೀ ವಾಕ್‌ನಿಂದ. ಭರ್ತೃಹರಿ ಹೇಳಿದ ವಾಕ್‌ನ ಈ ಮೂರು ಹಂತಗಳಲ್ಲದೆ 'ಲಘು ಮಂಜೂಷ' ಮತ್ತು 'ಸ್ಫೋಟವಾದ'ವೆಂಬ ಪ್ರಕರಣ ಗ್ರಂಥ ಬರೆದ ನಾಗೇಶಭಟ್ಟ ತಂತ್ರಶಾಸ್ತ್ರವನ್ನು ಅನುಸರಿಸಿ ಪರಾ ಎಂಬ ನಿಷ್ಕಲವಾದ, ಅತೀತ ವಾದ, ಹಂತವನ್ನು ಹೇಳುತ್ತಾನೆ.

### ಯೋಗ-ತಂತ್ರಗಳಲ್ಲಿ ಭಾಷಾ ವಿವೇಚನೆ

ನಾಗೇಶಭಟ್ಟ ಸ್ಫೋಟವಾದಕ್ಕೆ ಯೋಗ–ತಂತ್ರದ ಬೆಸುಗೆ ಹಾಕಿದ್ದು ಹೊಸತೇನಲ್ಲ. ಶಿಕ್ಷಾಶಾಸ್ತ್ರವು ಇಂಗಿತದಿಂದ ಶಬ್ದವು ಅಭಿವ್ಯಕ್ತವಾಗುವ ಕ್ರಮವನ್ನು ಹೇಳಿದರೆ, ಯೋಗಶಾಸ್ತ್ರವು ಶಬ್ದಜ್ಞಾನವು ಚಿತ್ತದಲ್ಲಿ ಆಗುವ ಕ್ರಮವನ್ನು ಹೇಳಿತ್ತು. ಭಾಷೆ–ಚಿತ್ತದಿಂದ ಬಾಯಲ್ಲಿ ನುಡಿಯಾಗಿ ಹೊರಬರುವುದನ್ನು ಗಮನಿಸಿ ಅದನ್ನು ತೈತ್ತಿರೀಯ ಉಪನಿಷತ್ತು ಶಿಕ್ಷಾವಲ್ಲಿಯಲ್ಲಿ ಉಪಾಸನೆಗೆ ತೆಗೆದುಕೊಂಡಂತೆ, ಯೋಗಶಾಸ್ತ್ರದಲ್ಲಿ (ಯೋಗಸೂತ್ರ ೩–೧೭) ಕೇಳಿದ ನುಡಿಯು ಚಿತ್ತಗತವಾಗುವುದನ್ನು ಗಮನಿಸಿ ಅದನ್ನು ಧ್ಯಾನಿಸುವ ಕ್ರಮ ಹೇಳುತ್ತದೆ. ವೈಯ್ಯಾಕರಣಿ ನಾಗೇಶಭಟ್ಟ ಯೋಗಸೂತ್ರಗಳಿಗೂ ಒಂದು ವೃತ್ತಿಯನ್ನು ಬರೆದಿದ್ದಾನೆ. ಸಂಪ್ರದಾಯದ ಪ್ರಕಾರ ಯೋಗಸೂತ್ರಕಾರನಾದ ಪತಂಜಲಿ ವ್ಯಾಕರಣ ಮಹಾಭಾಷ್ಯ ಬರೆದಾತನೆ. 'ಯೋಗೇನ ಚಿತ್ತಸ್ಯ, ಪದೇನ ವಾಚಾಂ, ಮಲಂಶರೀರಸ್ಯ ಚ ವೈದ್ಯಕೇನ । ಯೋಪಾಕರೋತ್ತಂ ಪ್ರವರಂ ಮುನೀನಾಂ, ಪತಂಜಲಿಂ ಪ್ರಾಂಜಲಿರಾನತೋಽಸ್ಮಿ ॥ ಎಂಬ ಶ್ಲೋಕ ಪತಂಜಲಿಯನ್ನು ಚಿತ್ತ–ವಾಕ್–ಕಾಯಗಳ ಚಿಕಿತ್ಸಕ ಎಂದಿದೆ* ಭರ್ತೃಹರಿಯಿಂದ ಮುಂದೆ ವ್ಯಾಕರಣಕ್ಕೆ ಶಬ್ದಾದ್ವೈತವು ಮುಖ್ಯತತ್ವ. ಆದರೆ ಪತಂಜಲಿಯ ಮಹಾಭಾಷ್ಯದಲ್ಲಿ, ಯೋಗಸೂತ್ರಗಳಲ್ಲಿ ದ್ವೈತವೇ ಲಕ್ಷಿತವಾಗಿದೆ. ನಾಗೇಶಭಟ್ಟನು ಮಾತ್ರ ಎರಡಕ್ಕೂ ಅದ್ವೈತದ ಅಭಿಪ್ರಾಯ ಬರುವಂತೆ ತಂತ್ರಶಾಸ್ತ್ರದ ಹಿನ್ನೆಲೆಯಲ್ಲಿ ವ್ಯಾಖ್ಯಾನಿಸುವುದು ಗಮನಿಸಬಹುದಾದ ಅಂಶ (ಅವನ ಸ್ಫೋಟವಾದ, ಲಘು–ಮಂಜೂಷ ಮತ್ತು ಯೋಗ ಸೂತ್ರ ವೃತ್ತಿಗಳನ್ನು ಒಟ್ಟಿಗೆ ನೋಡುವುದು ಅಗತ್ಯ.)

### ಯೋಗದಲ್ಲಿ

ಯೋಗ–ಶಾಸ್ತ್ರವು ಚಿತ್ತವೃತ್ತಿನಿರೋಧವನ್ನು ಹೇಳುತ್ತದೆ. ಐದು ಬಗೆಯ ಪ್ರಧಾನ ಚಿತ್ತವೃತ್ತಿಗಳಲ್ಲಿ ಮೊದಲನೆಯದು 'ಪ್ರಮಾಣ' ಪ್ರಮಾಣಗಳಲ್ಲಿ ಮೂರನೆಯದು ಹಾಗೂ ಕೊನೆಯದು 'ಆಗಮ' ಅಥವಾ 'ಶಬ್ದ' ಆಪ್ತನೊಬ್ಬ ನೋಡಿದ ಅಥವಾ

---

* ಇವಕ್ಕೆ ಆಂತರಿಕ ಪುರಾವೆಗಳು ಅಲ್ಲವಾದರೂ ಇವನ್ನು ವಿರೋಧಿಸಲು ಇರುವ ಪುರಾವೆಗಳೂ ಅಲ್ಲವೇ.

ಅನುಮಾನಿಸಿದ ವಿಷಯವನ್ನು ಹೇಳಿದಾಗ ಅದು ಕೇಳುವವನ ಮನಸ್ಸಿನಲ್ಲಿ ಅದೇ ವಿಷಯಕವಾದ ವೃತ್ತಿಯನ್ನು ಉಂಟುಮಾಡುತ್ತದೆ. ಈ ವೃತ್ತಿಯೇ ಶಬ್ದಪ್ರಮಾಣ. ಇದಕ್ಕೆ ವಿರುದ್ಧವಾಗಿ ಮಿಥ್ಯಾಜ್ಞಾನ (ಸುಳ್ಳುಜ್ಞಾನ) ಕೊಡುವಂತಹದ್ದು 'ವಿಪರ್ಯಯ' ಆದರೆ ಕೆಲವು ಸಲ ಅರ್ಥವತ್ತಾದ ಶಬ್ದಗಳಿಗೆ ಯಾವ ವಸ್ತುವೂ ವಿಷಯ ವಾಗಿರುವುದಿಲ್ಲ. ಅದು ಪ್ರಮಾಣವೂ ಅಲ್ಲ, ವಿಪರ್ಯಯವೂ ಅಲ್ಲ– ಅಂತಹದನ್ನು 'ವಿಕಲ್ಪ' ಎಂದು ಕರೆದಿದೆ. ಇದು ಅಮೂರ್ತ ವ್ಯವಹಾರ ನಿರ್ದೇಶಿಸುವ ಒಂದು ಮುಖ್ಯ 'ಕಲ್ಪನೆ'* (ಯೋ. ಸೂ. ೧, ೬ ರಿಂದ ೯ ಮತ್ತು ಅದರ ವ್ಯಾಸಭಾಷ್ಯ)

ಅನುಮಾನ ಮತ್ತು ಶಬ್ದಪ್ರಮಾಣಗಳಲ್ಲಿ ವಸ್ತುವನ್ನು ಸವಿಶೇಷವಾಗಿ ತಿಳಿಯುವು ದಿಲ್ಲ. ಇಲ್ಲಿನ ಜ್ಞಾನ–ಸಾಮಾನ್ಯಜ್ಞಾನ ಎಷ್ಟೇ ವಿಶೇಷಣಗಳಿದ್ದರೂ ಶಾಬ್ದಜ್ಞಾನವು ಊಹಾತ್ಮಕ ಸಾಕ್ಷಾತ್ತಾದ ಪ್ರತ್ಯಕ್ಷ ಮಾತ್ರವೇ ಸವಿಶೇಷ ಜ್ಞಾನ ಕೊಡಬಲ್ಲದು. ಇದು ಯೋಗದ ಇನ್ನೊಂದು ಮುಖ್ಯ ನಿಲುವು. ಆದ್ದರಿಂದಲೇ ಪ್ರತ್ಯಕ್ಷದ ಸಹಕಾರಿಯಲ್ಲದ ಅಥವಾ ಪ್ರತ್ಯಕ್ಷ ರಹಿತ ಶಾಬ್ದಜ್ಞಾನವು ಕೇವಲ ವಿಕಲ್ಪದ ಪರಿಧಿಗೆ ಬರುತ್ತದೆ (ವಿಶಿಷ್ಟಾ ದ್ವೈತವು ಇದಕ್ಕೆ ತದ್ವಿರುದ್ಧ ನಿಲುವು ತಳೆಯುತ್ತದೆ.)

ಭಾಷಾ ವಿಷಯಕವಾದ ಮುಖ್ಯ ಚರ್ಚೆ ಯೋ. ಸೂ. ೩–೧೭ ರಲ್ಲಿ ಬರುತ್ತದೆ. ಯೋಗಸೂತ್ರದ ಮೇಲಿನ ಮೊದಲ ಉಪಲಬ್ಧ ಭಾಷ್ಯ–ವ್ಯಾಸಭಾಷ್ಯ ಅದನ್ನು ಸುದೀರ್ಘವಾಗಿ ಚರ್ಚಿಸಿದೆ. ಸೂತ್ರ– 'ಶಬ್ದಾರ್ಥ ಪ್ರತ್ಯಯಾನಾಂ ಇತರೇ ತರಾಧ್ಯಾ ಸಾತ್–ಸಂಕರಃ, ತತ್‌ಪ್ರವಿಭಾಗ ಸಂಯಮಾತ್ ಸರ್ವಭೂತರುತ ಜ್ಞಾನಮ್'. ಎಂದಿದೆ. ಎಂದರೆ 'ಶಬ್ದ–ಅರ್ಥ–ಪ್ರತ್ಯಯಗಳನ್ನು ಒಂದಕ್ಕೆ ಇನ್ನೊಂದನ್ನು ಆರೋಪಿಸಿ ಬೆರಕೆಯಾಗಿದೆ. ಅವುಗಳ ಪ್ರವಿಭಾಗದ ಮೇಲೆ ಸಂಯಮ ಮಾಡುವುದ ರಿಂದ ಎಲ್ಲಾ ಭೂತಗಳ (ಪ್ರಾಣಿಗಳ) ಕೂಗಿನ ಜ್ಞಾನ ಬರುತ್ತದೆ' (ಯೋ. ಸೂ. ೩–೧೭) ಮೂರನೇ ಅಧ್ಯಾಯವು ಅನೇಕ ಸಂಯಮಗಳನ್ನು ಹೇಳುತ್ತದೆ. ಅವುಗಳಲ್ಲಿ ಭಾಷೆಯನ್ನು ಕುರಿತ ಸಂಯಮ ಇದು. ಧಾರಣ, (ನಿಶ್ಚಿತ ಸ್ಥಾನದ/ಅರ್ಥವಿಷಯದ ಮೇಲೆ ಚಿತ್ತವನ್ನು ನಿಲ್ಲಿಸುವುದು) ಧ್ಯಾನ (ಪ್ರತ್ಯಯವು ನಿರಂತರವಾಗಿ ಧಾರಣಾ ವಿಷಯದಲ್ಲಿರುವುದು) ಸಮಾಧಿ (ಧ್ಯಾನವೇ ವಿಷಯದಂತೆ ಹೊಳೆಯುತ್ತ ಸ್ವರೂಪ ಶೂನ್ಯವಾದಂತೆ ಅಂತರ್ಗತವಾಗುವುದು) ಈ ಮೂರೂ ಒಗ್ಗೂಡಿದ್ದೇ ಸಂಯಮ (ಯೋ. ಸೂ. ೩–೧ ರಿಂದ ೪). ಅದರ ಜಯದಿಂದ ಪ್ರಜ್ಞೆಯ ಬೆಳಕು. ಇಂತಹ ಸಂಯಮಕ್ಕೆ ವಿಷಯವಾದ ಭಾಷೆ ಮನುಷ್ಯ ಭಾಷೆಯ ಪ್ರವಿಭಾಗದಿಂದ ಎಲ್ಲ ಪ್ರಾಣಿಗಳ ಭಾಷೆಯನ್ನು ತಿಳಿಯುವಲ್ಲಿ ಫಲಿಸುತ್ತದೆ. ಈ ಸೂತ್ರದ ವ್ಯಾಸಭಾಷ್ಯ ವನ್ನಾಧರಿಸಿ ಭಾಷೆಯ ತೊಡಕು, ಅದನ್ನು ಬಿಡಿಸಿಕೊಳ್ಳುವುದರ ಬಗ್ಗೆ ಹೀಗೆ ಹೇಳ ಬಹುದು.

---

* ಬೌದ್ಧರಲ್ಲಿ ಇದು ಇನ್ನೂ ಮಹತ್ವ ಪಡೆದ ಪರಿಕಲ್ಪನೆ.

೧. ವರ್ಣಗಳ ಉಚ್ಚಾರಣೆಯೇ ವಾಕ್. ವರ್ಣಗಳನ್ನು ಏಕಕಾಲಕ್ಕೆ ಉಚ್ಚರಿಸಲಾರೆವು. ಪ್ರತ್ಯೇಕ ಉಚ್ಚರಿಸಿದರೆ ಒಂದು ಹೋದ ಮೇಲೆ ಮತ್ತೊಂದು ಬರುತ್ತದೆ. ಆದ್ದರಿಂದ ವರ್ಣಗಳು ಆ ಪದದ ಸ್ವರೂಪವೇ ಆಗಿವೆ.

೨. ಒಂದೊಂದು ವರ್ಣಕ್ಕೂ ಸ್ವತಃ ಬೇರೆ ಬೇರೆ ಅರ್ಥವಾದರೂ ಒಟ್ಟಿಗೆ ಸೇರಿದಾಗ ವರ್ಣ ಒಂದೊಂದು ಬೇರೆ ಅರ್ಥ ಕೊಡದೆ ಪದಕ್ಕೆ ಒಂದೇ ಅರ್ಥ ಕೊಡುತ್ತದೆ.

೩. ಹಾಗೆಯೇ ಎಲ್ಲ ಪದಗಳಲ್ಲಿಯೂ ವಾಕ್‌ಶಕ್ತಿ ಇದೆ. ಆದ್ದರಿಂದ ವರ್ಣದಿಂದ ವಾಕ್ಯದ ವರೆಗಿನ ಭಾಷಾ ಘಟಕ ಒಂದು ಕೂಗಷ್ಟೇ ಈ ಶಬ್ದ–ಕೂಗು ಅದು ಹೇಳುವ ಅರ್ಥ ಅಥವಾ ಬಾಹ್ಯವಸ್ತು ಮತ್ತು ಮಾನಸಿಕವಾದ ಅದರ ರೂಪ–ಪ್ರತ್ಯಯ ಇವು ಮೂರನ್ನೂ ನಾವು ಬೆರೆಸಿದ್ದೇವೆ. 'ಇದು ಹಸು ನನಗೆ ಗೊತ್ತು' ಎಂಬಲ್ಲಿ 'ಹಸು' ಎಂಬುದು ಶಬ್ದ ; ಹಸು ಎನ್ನುವುದು ಹೊರಗೆ ಇರುವ ವಸ್ತು–ಅರ್ಥ; ಹಸು ನಮ್ಮ ಜ್ಞಾನ ಕೂಡ. ಹಸು ಎಂಬ ಪದ–ಸಂಕೇತ. ಅದು ಶಬ್ದಾರ್ಥಗಳ ಬೆರಕೆಯಾಗಿ ನಮ್ಮ ಸ್ಮೃತಿಯಲ್ಲಿದೆ. ಹೀಗೆ ಬೆರೆತ ಶಬ್ದಾರ್ಥ ಪ್ರತ್ಯಯಗಳನ್ನು ವಿಂಗಡಿಸಿದರೆ ಎಲ್ಲಾ ಕೂಗುಗಳೂ ಅರಿವಿಗೆ ಬರುತ್ತವೆ. ಇದು ಒಂದು ಯೋಗ– ಇಲ್ಲಿ ಮಾತಿಗೂ ಕೂಗಿಗೂ ವ್ಯತ್ಯಾಸ ಮೂಲಭೂತವಲ್ಲ. ಒಂದಕ್ಕಿಂತ ಒಂದು ಸಂಕೀರ್ಣವಿರಬಹುದು ಆದರೆ ಮೂಲತಃ ಬೇರೆಯಲ್ಲ. ಭಾಷೆ–ಮನುಷ್ಯ ಮಾತ್ರದ್ದು ಎಂಬ ಸಿದ್ಧಾಂತಕ್ಕೆ ಸವಾಲು ಈ ನಿಲುವು. ನಮ್ಮ ಭಾಷೆಯನ್ನೇ ಜ್ಞಾನಕ್ಕೆ ಸಮೀಕರಿಸಿಕೊಂಡಿದ್ದರಿಂದಲೇ ಮಿಕ್ಕೆಲ್ಲ ಭಾಷೆಗಳು 'ಕೂಗಷ್ಟೇ' ಎಂದು ನಮಗನ್ನಿಸಿದರೆ, ಕೂಗೆಲ್ಲವೂ ಭಾಷೆ ಎನ್ನುವುದು ಯೋಗ.

### ತಂತ್ರದಲ್ಲಿ

ತಂತ್ರವು ಯೋಗದಲ್ಲಿ ಹೇಳುವ ಧಾರಣಾಕ್ಕೆ ಹೆಚ್ಚು ಮಹತ್ವ ಕೊಡುತ್ತದೆ. ಭಿನ್ನ ಸ್ಥಾನಗಳು ಎಂದರೆ ದೇಹದಲ್ಲಿನ ಸೂಕ್ಷ್ಮ ಚಕ್ರಗಳ ಮೇಲೆ ಚಿತ್ತವನ್ನು ನೆಲೆಗೊಳಿಸುವುದಲ್ಲದೆ, ಸಾಧನೆಯಲ್ಲಿ ಎಲ್ಲವನ್ನೂ ಈ ಚಕ್ರಗಳ ಜತೆಸಮೀಕರಿಸಿಕೊಳ್ಳುವುದು ಒಂದು ಪ್ರಮುಖ ವಿಧಾನ. ತಂತ್ರದಲ್ಲಿ ತಂತ್ರ–ಯಂತ್ರ–ಮಂತ್ರವೆನ್ನುವುದು ಮೂರು ಪ್ರಮುಖ ಅಂಗಗಳು. ಅಲ್ಲಿ ಮಂತ್ರವು ಅರ್ಥದ ಮನನಕ್ಕಿಂತಲೂ ಶಬ್ದತರಂಗಗಳ, ಧ್ವನಿ–ಲಯದ ಧ್ಯಾನಕ್ಕೆ ಮಹತ್ವ ಕೊಡುತ್ತದೆ. ಆದ್ದರಿಂದ ಮಂತ್ರವು ಪ್ರಸಿದ್ಧಾರ್ಥರಹಿತವೂ, ಆದರೆ ಮನಸ್ಸಿನ ನಾನಾರ್ಥಗಳನ್ನು ಕೂಡಿಸುವ ಅದರಿಂದ 'ಶಕ್ತಿ' ತರುವ ನಾದವಾಹವಾಗಿರುತ್ತದೆ. ನಾನಾತ್ವದಿಂದ ಏಕತ್ವಕ್ಕೆ ಒಯ್ಯುವ ಒಂದು ಧ್ಯಾನ ಕ್ರಮ ಮಂತ್ರ ಉಪಾಸನೆ, ಇಲ್ಲಿ ವಾಕ್ಯ ಮುಖ್ಯವಲ್ಲ, ಅಕ್ಷರಗಳ ಪುನರುಚ್ಚಾರಣೆ ಮುಖ್ಯ. ಇಂತಹ ಈ ಬೀಜಾಕ್ಷರಗಳು ಶಕ್ತಿ ವಾಹಕಗಳು. ಹೀಗೆ ಶಕ್ತಿ ಕೊಡುವ ಮಂತ್ರಗಳಲ್ಲಿ ಬೀಜಾಕ್ಷರಗಳು, ವಾಕ್‌ಪಟುತ್ವ ಕೊಡುವ 'ಕ್ರೀಂ' ಎಂಬ ಮಂತ್ರವೂ ಒಂದು. ಇದೇ ರೀತಿ ಯಂತ್ರಗಳಲ್ಲಿ ಅಕ್ಷರನ್ಯಾಸ

ಮಾಡಿ ಅದನ್ನು ಧ್ಯಾನಿಸುವುದೂ ಇದೆ. ಶ್ಲೋಕಗಳನ್ನು/ ಮಂತ್ರಗಳನ್ನು ಯಂತ್ರಕ್ಕೆ ಜೋಡಿಸುವ ಕ್ರಮವೇ ಕಾವ್ಯದಲ್ಲಿ ಚಿತ್ರಬಂಧಕ್ಕೆ ಮಾದರಿ ಎನ್ನಬಹುದು.

ಶಾಕ್ತ ತಂತ್ರದಲ್ಲಿ ಶಬ್ದ ಬ್ರಹ್ಮವೂ ಪರಬ್ರಹ್ಮವೂ ಒಂದೇ,* ಮಾಯೆಯಿಂದ ಬೇರಾದ 'ಘನೀಭೂತ ಬ್ರಹ್ಮವು' ಕರ್ಮ–ಪರಿಪಾಕಗಳೊಂದಿಗೆ ವಿಚಿಕೀರ್ಷಾ ಎನಿಸಿ ನಂತರ ಮಾಯಾವೃತ್ತಿ ಆರಂಭಿಸುತ್ತದೆ. ಮಾಯೆಯಿಂದ ಕೂಡಿದ್ದು ಅವ್ಯಕ್ತ. ಇದರಿಂದ ಜಗತ್ತಿನ ಅಂಕುರ. ಅದನ್ನು 'ಕಾರಣಬಿಂದು' ಎನ್ನುತ್ತಾರೆ. ಕಾರಣಬಿಂದುವಿನಿಂದ 'ಕಾರ್ಯ ಬಿಂದು' 'ಕಲಾ' ಅದರಿಂದ ನಾದ, ನಾದದಿಂದ ಬೀಜರೂಪವಾದ ವರ್ಣಗಳು. ವರ್ಣಗಳೇ 'ವೈಖರೀ ವಾಕ್', ಅವು ಸ್ಥೂಲರೂಪದ ವಿರಾಟ್‌ದೈವದ ರೂಪ. ಅದು ತನ್ನ ಹಿಂದಿನ ಸೂಕ್ಷ್ಮರೂಪದ ಹಿರಣ್ಯಗರ್ಭಾವಸ್ಥೆಯ ಜ್ಞಾನಾತ್ಮಕವಾದ 'ನಾದ'ವನ್ನು– ಎಂದರೆ 'ಮಧ್ಯಮಾವಾಕ್' ಅನ್ನು ಅವಲಂಬಿಸಿದೆ ಮತ್ತು ಅದನ್ನು ಮರೆಮಾಡಿದೆ. ಸೂಕ್ಷ್ಮವಾದ 'ನಾದ'ವು, ಪರರೂಪವಾದ ಈಶ್ವರ ಇಚ್ಛಾ ಸ್ವರೂಪದ 'ಕಾರ್ಯ ಬಿಂದು' ಅಥವಾ 'ಕಲಾ' ಎಂಬ ಪಶ್ಯಂತೀ ವಾಕ್‌ನಿಂದ ಹೊರಟಿದ್ದು ಅದನ್ನು ಮರೆಮಾಡುತ್ತದೆ. ಇವುಗಳಿಗೆ ಅತೀತವಾಗಿ ಅವ್ಯಕ್ತವಾದ ಕಾರಣಬಿಂದು (ಅಥವಾ 'ಬಿಂದು') ಪರಾವಾಕ್, (ಶೈವ ತಂತ್ರದಲ್ಲಿ ಶಿವ 'ನಾದ ಬಿಂದು ಕಲಾತೀತ' ಎಂದರೆ ಪರಾವಾಕ್‌ಗಿಂತ ಮಿಗಿಲು, ಅಲ್ಲಿ ಪರಾ ಮತ್ತು ಶಿವ ಅಭೇದ ಹೇಳುವ ಮತಗಳೂ ಇವೆ.)

ಮೂಲಾಧಾರದಲ್ಲಿರುವ ಕಾರಣ ಬಿಂದು–ಕುಂಡಲಿನಿ ಅದು ಪರಾವಾಕ್‌ನ ಸ್ಥಾನ. ಸುಷುಮ್ನೆಯೊಳಗೆ ತಿರುಗದ ಶಕ್ತಿ ಸ್ವಾಧಿಷ್ಠಾನದಲ್ಲಿ ಕಾರ್ಯ(ಕಲಾ) 'ಬಿಂದು'ವನ್ನು ಚೋದಿಸುತ್ತದೆ. ಅದು ಪಶ್ಯಂತೀ ವಾಕ್. ಮೂಲಾಧಾರದಲ್ಲಿ ಅವ್ಯಕ್ತವಾದದ್ದು ವಾಯು (ಪ್ರಾಣ) ಪ್ರೇರಿತವಾಗಿ ಸ್ವಾದಿಷ್ಠಾನ–ಮಣಿಪೂರಗಳಲ್ಲಿ ಎಂದರೆ ನಾಭಿಯಲ್ಲಿ (ಹೊಕ್ಕುಳಲ್ಲಿ) ವಿಮರ್ಶಾರೂಪವಾದ ಮನಸ್ಸಿನ ಜತೆಸೇರಿ ಸಾಮಾನ್ಯ ಸ್ಪಂದದಿಂದ ಪ್ರಕಾಶರೂಪದ ಕಾರ್ಯಬಿಂದುವಾಗಿರುವ 'ಪಶ್ಯಂತೀ ವಾಕ್' ಯೋಗಿಗಳಿಗೆ ಮಾತ್ರ ಗೋಚರಿಸುತ್ತದೆ.

ಅದೇ ವಾಯುವಿನಿಂದ ಕೂಡಿ ಹೃದಯವರೆಗೆ ಏರಿ ಅನಾಹತ ಚಕ್ರ ಸ್ಥಾನದಲ್ಲಿ ನಿಶ್ಚಯಾತ್ಮಕ ಬುದ್ಧಿಯ ಜತೆಗೂಡಿ ವಿಶೇಷ ಸ್ಪಂದದಿಂದ ಪ್ರಕಾಶರೂಪವಾಗಿ 'ನಾದ'ಮಯವಾದ 'ಮಾಧ್ಯಮಾವಾಕ್' ಎನಿಸಿಕೊಳ್ಳುತ್ತದೆ .(ಇದು ಮೂಕನಲ್ಲೂ ಇರುವ ವಾಕ್)

ನಾದವು ವಾಯುವಿನಿಂದ ಗಂಟಲಿಗೆ ಬಂದು (ವಿಶುದ್ಧಿ ಚಕ್ರ)ದಲ್ಲಿ ಸ್ವರಗಳಾಗಿ ಬೇರೆ ಭಾಗಗಳಿಗೆ ನಾಲಿಗೆ ಸಂಚರಿಸುವುದರಿಂದ 'ವೈಖರೀ ರೂಪ'ವಾದ ವಾಕ್ ಹೋರ ಹೊಮ್ಮುತ್ತದೆ.

* ಇದಕ್ಕೆ ಆಧಾರವಾಗಿ ಲಲಿತಾ ಸಹಸ್ರನಾಮದಲ್ಲಿನ ಪರಾ, ಪ್ರತ್ಯಕ್ ಚಿತೀರೂಪಾ, ಪಶ್ಯಂತೀ ಪರದೇವತಾ ಮಧ್ಯಮಾ ವೈಖರೀ ರೂಪ ಎಂಬ ನಾಮಗಳ ಮೇಲಿನ ಭಾಷ್ಯ ನೋಡಬಹುದು.

ವೈಖರೀ ವಾಕ್ ಬೀಜಾವಸ್ಥೆಯಲ್ಲಿದೆ. ಅದರಿಂದ ವಾಗ್ಜಾಲ. ಈ ವಾಕ್ ಅನ್ನು ನಾದದಲ್ಲಿ ಅದನ್ನು ಬಿಂದುವಿನಲ್ಲಿ ತಲ್ಲೀನಗೊಳಿಸಲು ಮಾತನ್ನು ಮಂತ್ರದಲ್ಲೂ ಮಂತ್ರ ಬೀಜಾಕ್ಷರದಲ್ಲೂ ಅದನ್ನು ನಾದದಲ್ಲೂ ಅದನ್ನು ಸ್ಪಂದದಲ್ಲೂ ಹಿಂತಿರುಗಿಸುವ ಉಪಾಸನಾ ಕ್ರಮಗಳನ್ನು ಹೇಳುತ್ತದೆ. ತಂತ್ರದಲ್ಲಿ ಮಾತು ಹೊರಟದ್ದನ್ನು ತಿಳಿಸುವುದು ಮೌನಕ್ಕೆ ಹಿಂತಿರುಗಲು ಮಾತ್ರ ಅದಕ್ಕೆ ನಾಲಗೆಯನ್ನು ಹಿಂದಕ್ಕೆ ತಿರುಗಿಸಿ (ಬಾಯಿ ಅಂಗಳಕ್ಕೆ ತಗುಲಿಸಿ) ಉಸಿರನ್ನು (ಕುಂಭಕದಲ್ಲಿ) ಹಿಡಿದಿಟ್ಟು ಪ್ರಾಣಶಕ್ತಿ ಮೂಲಾಧಾರ ದಿಂದ ಹೊರಗೆ ವ್ಯಾಪಿಸಿಕೊಳ್ಳದೆ ಒಳಗೆ ಸುಷುಮ್ನದಲ್ಲಿ ಮೇಲೆರುವಂತೆ ತೊಡಗಿಸುತ್ತದೆ.

ವೇದ–ತಂತ್ರ–ಕಾವ್ಯಗಳಲ್ಲಿನ ಭಾಷೆಯ ಉಪಾಸನೆ ಪದವಾಕ್ಯ ಪ್ರಮಾಣ ಶಾಸ್ತ್ರಗಳ ಚರ್ಚೆಗೆ ಸಮಾನಾಂತರವಾಗಿದೆ. ಭಾಷೆಯ ಅಧ್ಯಯನವು, ಉಪಾಸನೆ, ಶಾಸ್ತ್ರ ಎರಡನ್ನೂ ಪರಿಗಣಿಸಬೇಕು.

### ಉಪಸಂಹಾರವೆಂಬ ಉಪಕ್ರಮ

ಒಬ್ಬರ ಮನಸ್ಸಿನಲ್ಲಿ ಹುಟ್ಟಿ ಇನ್ನೊಬ್ಬರ ಮನೋದ್ರವ್ಯವಾಗುವ ವಾಕ್‌ತತ್ವದ ಬಗ್ಗೆ ಎಲ್ಲವನ್ನು ಹೇಳಿ ಮುಗಿಸಲು ಸಾಧ್ಯವಿಲ್ಲ. ಇಲ್ಲಿನ ಪ್ರಯತ್ನ ಖಂಡಿತ ಅಂತಹದಲ್ಲ. ಗುರುಗಳಾದ ಕೆ. ವಿ. ಎನ್. ಅವರು ಭಾಷಾಕೋಶಕ್ಕೆ ಒಂದು ಮಾಹಿತಿಯಾಗಿ ಬರೆಯಲು ಹೇಳಿದ್ದು ಒಂದು ಪುಸ್ತಿಕೆಯಾಗಿ ಬರುತ್ತಿದೆ. ಈಚಿನ ದಿನಗಳಲ್ಲಿ ನನ್ನ ವ್ಯಾಕರಣದ ಗುರುಗಳಾದ ವಿದ್ವಾನ್ ಮಹಾಬಲೇಶ್ವರ ಭಟ್ಟರ ಸಹಾಯವು ಒದಗಿದೆ. ಆದರೆ ಈ ಲೇಖನ ಮುಂದೆ ಎಂದಾದರು ಒಬ್ಬ ದೊಡ್ಡ ಪಂಡಿತರು– ತೀ. ನಂ. ಶ್ರೀ ಭಾರತೀಯ ಕಾವ್ಯಮೀಮಾಂಸೆ ಬರೆದಂತೆ– ಅಥವಾ ಹಲವು ಪಂಡಿತರು ಒಟ್ಟಾಗಿ ಬರೆಯಬೇಕಾದ ಕೃತಿ–ಭಾರತೀಯ ಭಾಷಾಶಾಸ್ತ್ರ. ಅದು ನನ್ನ ಹಲವು ವರ್ಷಗಳ ಕನಸು, ಅದನ್ನು ನನಸಾಗಿಸುವ ಕಸುವು ನಮಗೆ ಸಾಧ್ಯವಾಗಲಿ. ಇಲ್ಲಿ ಶಬ್ದ ನಿತ್ಯತ್ವವಾದ, ಶಬ್ದ ಪ್ರಾಮಾಣ್ಯವಾದ, ಅವುಗಳ ಖಂಡನೆ ಮುಂತಾದ ಪ್ರಮುಖ ವಿಷಯಗಳನ್ನೂ ಪ್ರಸ್ತಾಪಿಸಿಲ್ಲ. ವೇದಾಂತದ ಅದರಲ್ಲೂ ವಿಶಿಷ್ಟಾದ್ವೈತ, ದ್ವೈತ ಮತಗಳ, ಬೌದ್ಧರ ಶಬ್ದ ವಿಷಯಕ ಚರ್ಚೆಯನ್ನೂ ಮಾಡಿಲ್ಲ. ತಮಿಳಿನ ತೊಲ್‌ಕಾಪಿಯಂನ ಪ್ರಸ್ತಾಪವೂ ಇಲ್ಲ. ಕೆಲವು ವಿಷಯಗಳ ನಾಮೋಲ್ಲೇಖ ಮಾತ್ರವಾಗಿದೆ. ಆದ್ದರಿಂದ ಈ ಕೃತಿಯ ಉಪಸಂಹಾರ ಮುಂದೆ ದೊಡ್ಡ ಕೃತಿಗೆ ಉಪಕ್ರಮ ಎಂದು ಬಯಸೋಣ.

■■

ಕನ್ನಡ ವಿಶ್ವವಿದ್ಯಾಲಯದ ಪ್ರಥಮ ಗುರಿ 'ಕನ್ನಡ ಸಂಸ್ಕೃತಿ'ಯ ಶೋಧ, ವಿಮರ್ಶೆ ಮತ್ತು ಪ್ರಸಾರ. ಅಂತಿಮ ಗುರಿ ಸುತ್ತಲಿನ ಸಂಸ್ಕೃತಿಗಳ ವಿವೇಕ ಪೂರ್ಣ ವಿನಿಯೋಗ.

ಕನ್ನಡ ಸಮಾಜ, ಉದ್ದಕ್ಕೂ ದ್ವಿಭಾಷಾ ಸಂದರ್ಭದಲ್ಲಿ ಬದುಕುಮಾಡಿದೆ. ಹಿಂದಿನದು ಕನ್ನಡ-ಸಂಸ್ಕೃತ ದ್ವಿಭಾಷಾ ಸಂದರ್ಭ, ಇಂದಿನದು ಕನ್ನಡ-ಇಂಗ್ಲಿಷ್ ದ್ವಿಭಾಷಾ ಸಂದರ್ಭ. ಗ್ರಂಥಸ್ಥ ಭಾಷೆಯಾದ ಸಂಸ್ಕೃತಕ್ಕಿಂತ ಜೀವಂತ ಭಾಷೆಯಾದ ಇಂಗ್ಲಿಷ್ ಬೆಳಕಾಗುತ್ತಲೇ ಬೆಂಕಿಯಾಗಬಹುದೇ ? ಎಂಬ ಭಯ ನಮ್ಮಲ್ಲಿ ಹುಟ್ಟಿದೆ. ಹೆಚ್ಚಿನದಾಗಿ ಆಂಗ್ಲ ಜೀವನಶೈಲಿ ನಮ್ಮ ಜೀವನಾಡಿಗಳನ್ನು ದಿನೇದಿನೇ ನಿಯಂತ್ರಿಸತೊಡಗಿ, ಒಂದು ಬಗೆಯ ಅತಿರೇಕ ಸೃಷ್ಟಿಯಾಗುತ್ತಲಿದೆ.

ಗಾಂಧೀಜಿಯವರು ಈ ಅತಿರೇಕವನ್ನು ಬಹಳ ಹಿಂದೆಯೇ ಊಹಿಸಿ, 'ಸ್ವದೇಶೀ ಚಳುವಳಿ'ಯನ್ನು ಕೈಗೆತ್ತಿಕೊಂಡಿದ್ದರು. ಈ ಮತ್ತು ಇಂಥ ದೇಶೀ ಚಿಂತನೆಗಳ ಆದರ್ಶದಲ್ಲಿ 'ಕನ್ನಡವು ಕನ್ನಡವ ಕನ್ನಡಿಸುತಿರಬೇಕು' ಎಂಬಂತೆ ನಾವು ಕನ್ನಡವನ್ನು ಬದುಕಿಸಬೇಕಾಗಿದೆ, ಬೆಳೆಸಬೇಕಾಗಿದೆ. ಹಾಗೆ ಮಾಡಿದಾಗ ಮಾತ್ರ ಕನ್ನಡತ್ವವನ್ನು ನಾಶ ಮಾಡಿಕೊಂಡು ಜಾಗತಿಕವಾಗುವುದು ತಪ್ಪಿ, ಕನ್ನಡವೂ ಜಾಗತಿಕವಾಗುತ್ತದೆ. ಜಾಗತಿಕವಾಗುವುದೆಂದರೆ ಸ್ಥಾನಿಕದ ನಿರಾಕರಣೆ ಯಲ್ಲವೆಂಬ ಸತ್ಯ ಸ್ಥಾಪನೆಗೊಳ್ಳುತ್ತದೆ.

ಹೆಗಲ ಮೇಲೆ ಈ ಹೊಣೆಯನ್ನು ಹೊತ್ತು, ಅಸ್ತಿತ್ವಕ್ಕೆ ಬಂದಿರುವ ಕನ್ನಡ ವಿಶ್ವವಿದ್ಯಾಲಯ, ಅದನ್ನು ತನ್ನ ಪ್ರಸಾರಾಂಗದ ಮೂಲಕ ಪ್ರಧಾನವಾಗಿ ಪೂರೈಸುತ್ತಲಿದೆ. ಈ ನಿಟ್ಟಿನಲ್ಲಿ ಪ್ರಕಟವಾದ ಪುಸ್ತಕ 'ಭಾರತೀಯ ಭಾಷಾಧ್ಯಯನದ ಪರಂಪರೆ'.

ಡಾ. ಜೆ. ಶ್ರೀನಿವಾಸಮೂರ್ತಿ ಅವರು 'ಭಾರತೀಯ ಭಾಷಾಧ್ಯಯನದ ಪರಂಪರೆ' ಕುರಿತು ಮಂಟಪಮಾಲೆಗಾಗಿ ಈ ಕಿರುಪುಸ್ತಕವನ್ನು ರೂಪಿಸಿ ಕೊಟ್ಟಿದ್ದಾರೆ. ಇದಕ್ಕಾಗಿ ಅವರಿಗೆ ಕನ್ನಡ ವಿಶ್ವವಿದ್ಯಾಲಯದ ಕೃತಜ್ಞತೆಗಳು.

ಎಂ. ಎಂ. ಕಲಬುರ್ಗಿ
ಕುಲಪತಿಗಳು

---

## ಮಂಟಪ ಮಾಲೆ-೮೬

---